ಕನ್ನಡ ಕಾವ್ಯಮಾಲೆ—೪೨

# ಕೃತ್ತಿಕೆ

ಕುವೆಂಪು



ಮೈಸೂರು
ಕಾವ್ಯಾಲಯ
೧೯೪೬

# ಅರಿಕೆ

ಕೃತ್ತಿಕೆ : ಇಲ್ಲಿ ಶ್ರೀ ಕುವೆಂಪು ಅವರ ಸಾನೆಟುಗಳನ್ನು—ಅಷ್ಟ ಷಟ್ಪದಿಗಳನ್ನು ಮೊದಲಬಾರಿಗೆ ಸಂಗ್ರಹಿಸಲಾಗಿದೆ. ಇವುಗಳಲ್ಲಿ ಕೆಲವು ಈ ಹಿಂದೆಯೆ 'ಪ್ರಬುದ್ಧ ಕರ್ಣಾಟಕ' ಮೊದಲಾದ ಪತ್ರಿಕೆಗಳಲ್ಲಿ ಅಚ್ಚಾದುವು. ಉಳಿದ ಬಹುಭಾಗ ಈಗಲೇ ಬೆಳಕಿಗೆ ಬರುತ್ತಿರುವುದು. ಇವಲ್ಲದೆ, ಹನ್ನೆರಡು ಹದಿಮೂರು ವರುಷಗಳ ಹಿಂದೆ ಪ್ರಕಟವಾದ 'ಪಾಂಚಜನ್ಯ', 'ನವಿಲು' ಎಂಬ ಕವಿತಾ ಸಂಗ್ರಹಗಳಲ್ಲಿ-ಇಲ್ಲಿ ಸೇರದಿರುವ ಹದಿನಾರು ಸಾನೆಟುಗಳಿವೆ. ಕುತೂಹಲವುಳ್ಳವರು ಅವನ್ನೂ ನೋಡಬಹುದು.

ಇಲ್ಲಿನ ಅಷ್ಟಷಟ್ಪದಿಗಳಲ್ಲಿ ವಿವಿಧ ಅಂತ್ಯಪ್ರಾಸ ರಚನೆಗಳನ್ನು ಕಾಣಬಹುದು.

ಈ ಕವಿತೆಗಳ ವಿಷಯ-ಕುವೆಂಪು ಅವರ ಮಲೆಯನಾಡಿನ-ಗಿರಿಪಂಕ್ತಿ ವನರಾಜಿಗಳು, ನದಿ ತೊರೆಗಳು, ಮುಳಿ ಮೋಡ ಬಾನು; ಅಲ್ಲಿನ ಸಂಜೆಗಿರಿ, ಕವಿಶೈಲ, ನವಿಲುಕಲ್ಲುಗಳಲ್ಲಿ ಮನವನ್ನು ಸೂರೆಗೊಳ್ಳುವ ಸಂಜೆ, ಮಂಜು, ಮೌನ, ಕಗ್ಗತ್ತಲು, ಉಷಃಕಾಲ, ಬೆಳುದಿಂಗಳು, ನೆಳಲು ಬೆಳಕುಗಳ ರಮಣೀಯತೆ; ಶೃಂಗಾರ, ವೈರಾಗ್ಯ, ಭಕ್ತಿ; ಕಲೆ, ಕವಿತೆ, ನೀತಿ; ವಿಜ್ಞಾನ, ವಿಮರ್ಶೆ; ಕೀರ್ತಿ, ಯಶಸ್ಸು; ಜನರ ಮೌಢ್ಯ, ಕ್ರೌರ್ಯ, ಸ್ವಾರ್ಥತೆ, ಆದರ್ಶ; ಜೀವನ ವಿಮರ್ಶೆ, ನಾಡಿನ ಚಿಂತೆ; ಈ ಕಾಲದ ಗತಕಾಲದ ಮಹಾವ್ಯಕ್ತಿಗಳ ನೆನಹು, ಪ್ರಶಂಸೆ;-ಹೀಗೆ ಬಹುಮುಖವಾದದ್ದು.

ಕುವೆಂಪು ಅವರ ಕವನಗಳನ್ನೂ ಚಿತ್ರಗಳನ್ನೂ ಓದಿದವರಿಗೆ ಕವಿಶೈಲ, ಸಂಜೆಗಿರಿ ಮೊದಲಾದ ತಾಣಗಳ ಹೆಸರು ಪರಿಚಿತವಾದುವು. ಇಲ್ಲಿ ಬರುವ ಸಿಬ್ಬಲುಗುಡ್ಡೆ, ಅಂಚೆಮನೆಯ ಅರೆಕಲ್ಲು, ಏಳುಸೀಳು ಮೊದಲಾದ ಕೆಲವು ಸ್ಥಳಗಳ ವಿಚಾರವಾಗಿ ಎರಡೆರಡು ಮಾತುಗಳನ್ನು ಹೇಳುವುದು ಅಪ್ರಕೃತವಾಗಲಾರದು.

ಅಶೋಕವನ—ಕುವೆಂಪು ಅವರ ಹಳ್ಳಿ ಕುಪ್ಪಳಿಯಿಂದ ಎದುರಿಗಿರುವ ಪರ್ವತಶ್ರೇಣಿಯ ಶಿಖರಸ್ಥಾನದಲ್ಲಿ ಹಳ್ಳಿಯಿಂದ ಸುಮಾರು ಎರಡೂವರೆ ಮೈಲಿ ದೂರದಲ್ಲಿರುವ ವನಸ್ಥಳ.

ಅಂಚೆಮನೆಯ ಅರೆಕಲ್ಲು-ಕುಪ್ಪಳಿಯಿಂದ ಸುಮಾರು ಒಂದೂವರೆ ಮೈಲಿ ದೂರದಲ್ಲಿ ಕಾಡುದಾರಿಯ ನಡುವೆ ಇರುವ ಹಳ್ಳದ ಹಾಸುಬಂಡೆಗಳು. ಈ ಹಾಸುಬಂಡೆಗಳ ಮೇಲೆ ಹಾಯಾಗಿ ಕುಳಿತೋ ಮಲಗಿಯೋ ಒಮ್ಮೆ ನೀಲಿಬಾನಿನ ಕಡೆ ಕಣ್ಣುತಿರುಗಿಸುತ್ತ, ಇನ್ನೊಮ್ಮೆ ಹಸುರುಕಾನನದ ಕಡೆ ದೃಷ್ಟಿ ಹೊರಳಿಸುತ್ತ, ತೊರೆಯ ಜುಳುಜುಳು ನಿನದಕ್ಕೆ ಕಿವಿಗೊಟ್ಟು ನಿಶ್ಚಿಂತೆಯಾಗಿ ಕಾಲಕಳೆಯಬಹುದಾದ ತಾಣ.

ಏಳುಸೀಳು—ಶಿವಮೊಗ್ಗೆ ತೀರ್ಥಹಳ್ಳಿಯ ರಸ್ತೆಯಲ್ಲಿ ಶಿವಮೊಗ್ಗೆಯಿಂದ ಸುಮಾರು ಎಂಟು ಮೈಲಿಗಳ ದೂರದಲ್ಲಿ ಸಕ್ಕರೆಬಯಲಿನ ಕಾನಿನಲ್ಲಿ ತುಂಗಾನದಿ ಏಳುಸೀಳಾಗಿ ಒಡೆದು, ತಕ್ಕಷ್ಟು ದೂರ ಹರಿದು, ಪುನಃ ಒಂದಾಗುತ್ತದೆ. ಒಂದೊಂದು ಸೀಳೂ ಒಂದು ನದಿಯೆ-ಬರಿಯ ಕಾಲುವೆಯಲ್ಲ. ಸೀಳುಸೀಳಿನ ಮಧ್ಯೆ ಮಳಲು ಮರ ಗಿಡ ಬಂಡೆಗಳ ದ್ವೀಪ. ಸ್ನೇಹಿತರನ್ನು ಕೂಡಿಕೊಂಡು ವಿಹಾರ ಹೋಗಲು ಸೊಗಸಾದ ಸ್ಥಳ.

ಸಿಬ್ಬಲುಗುಡ್ಡೆ—ತೀರ್ಥಹಳ್ಳಿಯಿಂದ ಸುಮಾರು ಎರಡೂವರೆ ಮೈಲಿ ದೂರದಲ್ಲಿ ಮೇಳಿಗೆಯೆಂಬ ಹಳ್ಳಿ. ಅಲ್ಲಿಂದ ಒಂದೂವರೆ ಮೈಲಿ ಕಾಡಿನ ಕಾಲುದಾರಿಯಲ್ಲಿ ನಡೆದು ಹೋದರೆ ಸಿಬ್ಬಲುಗುಡ್ಡೆ ಸಿಕ್ಕುತ್ತದೆ. ಈ ಸ್ಥಳ ಹಳ್ಳಿಯೂ ಅಲ್ಲ, ಊರೂ ಅಲ್ಲ. ಅಲ್ಲಿ ಇರುವುದೊಂದೇ ಕಟ್ಟಡ: ಗುಡಿಸಲಿನಂತೆ ತೋರುವ ಗಣೇಶನ ಗುಡಿ. ಅಲ್ಲಿಯೆ ಗುಡಿಯ ಅರ್ಚಕ. ಬೇರೆ ಮನೆಗಳಿಲ್ಲ, ಜನವಿಲ್ಲ.

ಗುಡಿಯ ಹಿಂದೆ ನಿಬಿಡ ನಿರ್ಜನಾರಣ್ಯಗಳ ನಡುವೆ ಹರಿಯುವ ತುಂಗೆ. ಆಚೆ ದಡದಲ್ಲಿ ತುಸು ಹಳದಿ ಬಣ್ಣದ ಬಿಳಿಯ ಮಳಲ ರಾಶಿ, ಅದರಂಚಿನಲ್ಲಿ ಹಚ್ಚ ಹಸುರಿನ ವನಪಂಕ್ತಿ. ಗುಡಿಯ ಹಿಂಭಾಗದ

ನೀರಿನಲ್ಲಿ ನಿರ್ಭೀತಿಯಿಂದ ಚಲಿಸುವ ದೊಡ್ಡ ದೊಡ್ಡ ಮೀನುಗಳು. ಈ ಮೀನುಗಳನ್ನು ಯಾರೂ ಹಿಡಿಯಲಾರರು, ಹಿಡಿಯಲಾಗದು. ಅವು ವಿಘ್ನೇಶನ ರಕ್ಷೆಯಲ್ಲಿ ಬೆಳೆದು ವಿಹರಿಸುತ್ತಿವೆ. ಬೆಳಗಿನ ಜಾವ ನವಿಲು ಕಲ್ಲಿಗೆ ಹೋಗಿ ಸೂರ್ಯೋದಯುವನ್ನು ನೋಡಿ, ಬಿಸಿಲವೇಳೆಗೆ ಹಿಂದಿರುಗಿ ಬರುವಾಗ, ಸಿಬ್ಬಲುಗುಡ್ಡೆಯಲ್ಲಿ ನಿಂತು, ಹೊಳೆಯಲ್ಲಿ ಮಿಂದು, ಗಣೇಶನಿಗೆ ನಮಸ್ಕಾರಹಾಕಿ, ಮೀನುಗಳಿಗೆ ಪುರಿ ಎರಚಿ ಅವುಗಳಾಟ ನೋಡಿ ಆಯಾಸ ಕಳೆಯಲು ಅನುಕೂಲವಾದ ಅರಣ್ಯ ನಿಲ್ದಾಣ.

ಈ ಪುಸ್ತಕದ ಹೊದಿಕೆಯ ಚಿತ್ರಕ್ಕೆ ತರುಣ ಲೇಖಕರಾದ ಶ್ರೀ ರಾ. ವೆಂ. ಶ್ರೀ. ಅವರಿಗೆ ನಾವು ಋಣಿ.

ಕೂಡಲಿ ಚಿದಂಬರಂ

———

# ವಿ ವ ರ


| | | ಪುಟ |
|---|---|---|
| | ಅರಿಕೆ | iii |
| ೧. | ವೈಶಾಖ ಪಾಡ್ಯಮಿ | ೧ |
| ೨. | ತೀರ್ಥಹಳ್ಳಿಯ ರಾಮತೀರ್ಥದಲ್ಲಿ | ೨ |
| ೩. | ಅಶೋಕವನದಲ್ಲಿ | ೩ |
| ೪. | ಅಂಚೆಮನೆಯ ಅರೆಕಲ್ಲಿನಲಿ | ೪ |
| ೫. | ಅಶೋಕದ ಹೂಗೊಂಚಲು | ೫ |
| ೬. | ಸಂಜೆಗಿರಿಯಲಿ ಸಂಜೆ | ೬ |
| ೭. | ಪರ್ವತಾರಣ್ಯಗಳಲ್ಲಿ | ೭ |
| ೮. | ಕವಿಶೈಲ—೧ | ೮ |
| ೯. | ಕವಿಶೈಲ—೨ | ೯ |
| ೧೦. | ಕವಿಶೈಲ—೩ | ೧೦ |
| ೧೧. | ಕವಿಶೈಲ—೪ | ೧೧ |
| ೧೨. | ಕವಿಶೈಲ—೫ | ೧೨ |
| ೧೩. | ಕವಿಶೈಲ—೬ | ೧೩ |
| ೧೪. | ಕೊಳಲು | ೧೪ |
| ೧೫. | ಹೆಣ್ಣು | ೧೫ |
| ೧೬. | ರಸವೊಂದೆ ಕವಿಗೆ ನೀತಿ | ೧೬ |
| ೧೭. | ಪ್ರೇಮಕ್ಕೆ | ೧೭ |
| ೧೮. | ಮಾಯೆ-ಮುಕ್ತಿ | ೧೮ |
| ೧೯. | ಕ್ಷೇಮಕಾರಿ | ೧೯ |
| ೨೦. | ಸಂಸ್ಕಾರ ಸರ್ಪಿಣಿ | ೨೦ |
| ೨೧. | ಹಗಲುಗನಸು | ೨೧ |
| ೨೨. | ಅಗಲಿಕೆಯ ಹಂಬಲು | ೨೨ |
| ೨೩. | ನನ್ನ ದೇವರು ನೀನು | ೨೩ |
| ೨೪. | ಕಲೆ ಮತ್ತು ನೀನು | ೨೪ |

೨೫. ಕವಿಯ ಮನಸ್ಸು .... .... ೨೫
೨೬. ಕವನಗಳೆ ಮಂತ್ರಗಳು .... ... ೨೬
೨೭. ಖಗೋಲವಿಜ್ಞಾನದ ಪ್ರಥಮ ಪರಿಚಯ .... ೨೭
೨೮. ನನ್ನ ಶೈಲಿ .... .... ೨೮
೨೯. ರಸಸಿದ್ಧಿ .... .... ೨೯
೩೦. ನನ್ನ ಕವಿತೆ ತನ್ನ ವಿಮರ್ಶಕನಿಗೆ .... ೩೦
೩೧. ಕವನ ಕೇಳುವವನಿಗೆ .... .... ೩೧
೩೨. ಗ್ರಾಮಸಿಂಹ .... .... ೩೨
೩೩. ಎಚ್ಚರಿಕೆ .... .... ೩೩
೩೪. ಮಲೆನಾಡಿಗೆ .... .... ೩೪
೩೫. ಕೀರ್ತಿಶನಿ .... .... ೩೫
೩೬. ಕವಿಯ ತೃಪ್ತಿ .... .... ೩೬
೩೭. ಏಳು ಸೀಳು--೧ .... .... ೩೭
೩೮. ಏಳು ಸೀಳು—೨ .... .... ೩೮
೩೯. ಕನ್ನಂಬಾಡಿ—(೧) ಬೃಂದಾವನ .... ೩೯
೪೦. ಕನ್ನಂಬಾಡಿ—(೨) ನೀರಾಕರ .... .... ೪೦
೪೧. ಕನ್ನಂಬಾಡಿ--(೩) ನೀರ್ಬಾಗಿಲೆಡೆ .... ೪೧
೪೨. ಕನ್ನಂಬಾಡಿ—(೪) ಕಟ್ಟೆ .... .... ೪೨
೪೩. ಕನ್ನಂಬಾಡಿ—(೫) ಪ್ರೇಕ್ಷಕನೊಬ್ಬನಿಗೆ .... ೪೩
೪೪. ಕನ್ನಂಬಾಡಿ (೬) ದಾರಿಯ ಹಳ್ಳಿ .... ೪೪
೪೫. ಸಿಬ್ಬಲುಗುಡ್ಡೆ .... .... ೪೫
೪೬. ನವಿಲುಕಲ್ಲಿನಲಿ ಉಷಃಕಾಲ .... .... ೪೬
೪೭. ರಾಜಧಾನಿ .... .... ೪೭
೪೮. ಮೋಡಗಳು .... .... ೪೮
೪೯. ಪೂರ್ಣಯೋಗಿಯೆ ಪರಮಭೋಗಿ .... ೪೯
೫೦. ಊರ್ಮಿಳಾದೇವಿ .... .... ೫೦
೫೧. ಹೋಮರ್ .... .... ೫೧

೩೨. ವಿಶ್ವಭಿಕ್ಷು .... .... ೩೨
೩೩. ವರ್ಡ್ಸ್‌ವರ್ತ್ .... .... ೩೩
೩೪. ಪಂಜೆಯವರಿಗೆ .... .... ೩೪
೩೫. ಸ್ವಾಮಿಜಿಗೆ .... .... ೩೫
೩೬. ಚಂದ್ರಗ್ರಹಣ ಮತ್ತು ಸಾಕ್ರೆಟೀಸ್ .... ೩೬
೩೭. ಬಲಿಪಾಡ್ಯಮಿ .... .... ೩೭
೩೮. ಕಂಸಶಿಲೆ .... .... ೩೮
೩೯. ಅಶೋಕ ಚಕ್ರವರ್ತಿ .... .... ೩೯
೪೦. ಧನ್ಯೆ ದಲ್ ಲಕ್ಷ್ಮಿ! .... .... ೪೦
೪೧. ದೇಶಭಕ್ತನ ಬಯಕೆ .... .... ೪೧
೪೨. ಚಿತ್ರಭಾನು .... .... ೪೨
೪೩. ಕ್ರಾಂತಿಕಾಳಿ .... .... ೪೩
೪೪. ಬೆಕ್ಕು-ಇಲಿ .... .... ೪೪
೪೫. ಲೆನಿನ್ .... .... ೪೫
೪೬. ಆಸ್ಪತ್ರೆ .... .... ೪೬
೪೭. ಟಾಲ್‌ಸ್ಟಾಯ್ .... .... ೪೭
೪೮. ಮಾದೇಶ್ವರನ ಬೆಟ್ಟಕಂತೆ! .... .... ೪೮
೪೯. ರಾಷ್ಟ್ರೀಯ ವಿಷಮತೆ .... .... ೪೯
೫೦. ತ್ಯಾಗವಿಲ್ಲದ ದೇಶಭಕ್ತಿ ಕ್ಲೈಬ್ಯಕೆ ಯಷ್ಟಿ .... ೫೦
೫೧. ದೇಶಭಕ್ತನೊರ್ವನಿಗೆ .... .... ೫೧
೫೨. ಸತ್ತನೆ ಸೈನ್ಯಪತಿ! .... .... ೫೨
೫೩. ದೇಶಭಕ್ತನ ಉತ್ತರವಾಣಿ .... .... ೫೩
೫೪. ರಸವಿರಲು ಜಸವೇಕೆ .... .... ೫೪
೫೫. ಯಶೋಲಕ್ಷ್ಮಿ .... .... ೫೫

# ಕೃತ್ತಿಕೆ

---

## ವೈಶಾಖ ಪಾಡ್ಯಮಿ

ಗಿರಿಪಂಕ್ತಿ ವನರಾಜಿ ಬುವಿ ಬಾನು ಮುಗಿಲೋಳಿ
  ವೈಶಾಖಪಾಡ್ಯಮಿಯ ಬೆಳ್ದಿಂಗಳನು ಹೀರಿ,
  ಮಧುಮಾಸದುನ್ಮಾದ ಚಂದ್ರಿಕೆಯ ಮತ್ತೇರಿ
ಜೋಂಪಿಸಿವೆ! ಜ್ಯೋತ್ಸ್ನಶಿವನಪ್ಪಿದ ನಿಶಾಕಾಳಿ
ಪ್ರೇಮ ಸುಖ ವಿಸ್ಮೃತಿಯ ರಸಗಂಗೆಯಲಿ ತೇಲಿ
  ರಾಜಿಸಿರೆ ಲಜ್ಜೆಮಾಧುರ್ಯದಿಂ ಬಿಳುಪೇರಿ,
  ಕಾಳಿಮವನುಳಿದು ಶ್ರೀಗೌರಿಯಂದದಿ ತೋರಿ,
ಸ್ಮಿತರುಚಿರನಾಗಿರುವನದೊ ಭುವನ ಕಾಪಾಲಿ!
ಏಂ ನಿರ್ಜನತೆ, ನೀರವತೆ, ನಿಶ್ಚಲತೆ, ಶಾಂತಿ :
  ತೇಲುತಿದೆ ಜಗವೆಲ್ಲ ಚಂದ್ರಿಕಾಸ್ವಪ್ನದಲಿ,
    ಮಾತೃ ಮೃದುವಕ್ಷದಲಿ ನಿದ್ರಿಪ ಶಿಶುವಿನಂತೆ!
ಪ್ರಿಯಬಂಧು, ಇದೆ ಹೊತ್ತು ಧ್ಯಾನಕ್ಕೆ; ಹೃದ್ಗ್ರಂಥಿ
  ಪ್ರಲಯಕ್ಕೆ: ಏಳೈ, ಸಮಾಧಿಸ್ಥ ವಿಶ್ವದಲಿ
    ತಲ್ಲೀನವಾಗುವಂ, ಛವಿ ರವಿಯೊಳಾಗುವಂತೆ!

# ತೀರ್ಥಹಳ್ಳಿಯ ರಾಮತೀರ್ಥದಲ್ಲಿ

ಶಾಂತವಾಗಿದೆ ಸಂಧ್ಯೆ; ಮೃದುಲ ಸಾಯಂ ಕಾಂತಿ
ವ್ಯಾಪಿಸಿದೆ ಭೂಮಿ ವ್ಯೋಮಂಗಳಂ; ನಭದಲ್ಲಿ,
ಕೆನ್ನೀಲಿ ಹಳದಿಯಲಿ, ಮಿರುಗುತಿಹುದಾ 'ಬೆಳ್ಳಿ',
ಥಳಿಸಿ! ಈ ದಿವ್ಯವೈಶಾಖ ಸಂಧ್ಯೆಯ ಶಾಂತಿ,
ಮೊರೆಮೊರೆದು ಭೋರ್ಗರೆದು ಕಲ್ಗಳೆಡೆ ನೊರೆಸೂಸಿ
ಹರಿವ ಈ ತುಂಗೆ, ಕರಿಯಾನೆಗಳ ಹಿರಿದಂಡು
ಬಿದ್ದವೋಲೆಸೆವ ಈ ಹೆಬ್ಬಂಡೆಗಳ ಹಿಂಡು,
ಸಂಜೆಗೆಂಪೊಳು ಮಿಂದು ಹಬ್ಬಿಹ ಮುಳಲ ರಾಶಿ,
ಎಲ್ಲವೂ ಚಿರ ಚಿತ್ರಗತವಾದವೊಲು ತೋರಿ,
ಸ್ಥೂಲ ಜಡವೆಂಬ ವಾಸ್ತವತೆ ಮನದಿಂ ಮಾಸಿ
ಕಣಸಾಗಿ ಮೂಡುತಿದೆ: ವಿಶ್ವಕವಿವರನ ಕಾವ್ಯಂ
ಭುವನವಿದು. ಸುರಗಾನದಾ ಛಂದಸನೆ ಸಾರಿ
ಹರಿಯುತಿದೆ ಹೊಳೆ; ನಿಂತಿಹುದು ಬಂಡೆ; ಇದೆ ಬೀಸಿ
ತಂಗಾಳಿ! ಅಃ ಆಲಿಸಾ, ಎನಿತು ಸುಶ್ರಾವ್ಯಂ!

# ಅಶೋಕವನದಲ್ಲಿ

ಪಥರಹಿತ ವನರಾಜಿ, ತಣ್ಣೆಳಲು, ತಂಗಾಳಿ :
  ನಿಶ್ಶಬ್ದ ಸ್ವಾತಂತ್ರ್ಯ ಸಾಮ್ರಾಜ್ಯವಿದೆ ನೋಡು !
  ಹಸುರಿನಲಿ ಬಿಸಿಲು ಸೆರೆ. ಬನಗತ್ತಲೆಯು ಬೀಡು
ಮೌನವಾರಿಧಿಯೊಂದು ಮಡುವಿನಾಳವ ತಾಳಿ
ಗಂಭೀರವಾಗಿಹುದು. ಸುಂದರ ಅಶೋಕವನ
  ಧಾಮವಿದು ಹಿಂದಣ ತಪೋವನದ ಶಾಂತಿಯಂ
  ಸೂಸುತಿದೆ ಮನಕೆ, ಮೇಣ್ ನಂದನ ಭ್ರಾಂತಿಯಂ.
ಭಾವದಲಿ ವನಲೀನವಾಗುತಿಹುದೆನ್ನ ಮನ !
ಆಪಾದಮಸ್ತಕಂ ರಕ್ತ ಸುಮ ಮಂಜರಿಯ
  ಶೃಂಗಾರ ಸಂಭ್ರಮದ ಸಂತೋಷದಲಿ ನಿಂತು
ತರು ಸುಂದರಿಯರಿದೊ ಅಶೋಕವನದೈಸಿರಿಯ
  ಮೆರೆದಿಹರ್ ! ತವಸಿಯಾಗಿಹನಿಲ್ಲಿ ಆ ಕಂತು !
ನಾದಗೈವುದುಮಿಲ್ಲಿ ಪಾತಕವೊ, ಹೇ ಬಂಧು ;
ಸ್ವಾಚ್ಛಂದ್ಯ ಸೌಂದರ್ಯ ಶಾಂತಿಗಳಿಗಿದು ಸಿಂಧು !

# ಅಂಚೆಮನೆಯ ಅರೆಕಲ್ಲಿನಲಿ

## ೧

ಕುಳಿತಿರುವೆನೇಕಾಂಗಿ ಹಾಸುಬಂಡೆಯ ಮೇಲೆ :
ನೆತ್ತಿಯೆಡೆ ತಿಳಿಬಾನು, ಸುತ್ತಲೂ ವನಧಾತ್ರಿ;
ಮೊರೆಯುತಿಹುದೆನ್ನ ಕರೆಯುತೆ ಅನವರತ ಯಾತ್ರಿ
ಮಂಜುಲ ತರಂಗಿಣಿಯ ಜಲಶಿಲಾ ಕಲಲೀಲೆ.
ಭೂತಕಾಲದ ಗರ್ಭದಲಿ ನಾನು ಕನಸಾಗಿ
ಕನವರಿಸುತಿದ್ದಂದು ನೀನಿಂತೆ ಹರಿದಿದ್ದೆ ;
ಬರುವ ಶತಮಾನ ಯುಗಕಲ್ಪಗಳ ಜವನಿದ್ದೆ
ಮತ್ತೆನ್ನ ತುತ್ತುಗೊಳೆ, ಬೇರೆ ಯಾರನೊ ಕೂಗಿ
ನೊರೆಚೆಲ್ಲಿ ಮೊರೆದು ಹರಿಯುವೆ ಮುಂದೆ ನೀನಿಂತೆ,
ಓ ತೊರೆಯೆ !—ಮನಕಿನಿಸು ನೋವು ತರುವಾ ಚಿಂತೆ
ಅಂತಿರಲಿ.—ಮುಂದೆ ಎಂತೋ ಏನೊ ? ನಾನಿಂದು
ಬಿಸಿಲ ಬೇಗೆಯ ಕಳೆಯೆ ನಿನ್ನ ತಡಿಗೈತಂದು
ಮಲಗಿಹೆನು ಮರದ ತಣ್ಣೆಳಲಿನಲಿ ಮೈಚಾಚಿ :
ಗಾನಗೈಯುಲಿ ನಿನ್ನ ಗೇಯಲೋಲುಪ ವೀಚಿ !

# ಅಶೋಕದ ಹೂಗೊಂಚಲು

‘ಕೆಂಪಡರುತಿದೆ ಮೂಡಣದ್ರಿಯ ನಭದ ಮೇರೆ;
ಪಗಲಾಣ್ಮ ನೈತರುವನಿನ್ನೇನು!’—ಎಂದು ಗಿಳಿ
ಮಡಿವಾಳ ಕಾಜಾಣ ಪಿಕಳಾರ ಪಿಕಗಳುಲಿ
ತನ್ನ ಹಗೆಯೈತರವನುಚ್ಚ ತಾನದಿ ಸಾರೆ,
ಬೆಚ್ಚಿ, ಬೇಗನೆ ಕಣಿವೆ ಮಲೆಗಳನಿಳಿಯುತೇರಿ
ಪಶ್ಚಿಮಾಚಲವ ಮರೆಗೊಳ್ಳನೆಂದಿರದೋಡಿ
ಪೋಪಿರುಳು ದಾರಿಯೊಳಶೋಕವನವನು ನೋಡಿ,
ಸಾಂದ್ರತೆಗಳುಪುತವಿತುಕೊಳೆ ಆಶ್ರಯವ ಕೋರಿ;
ವನಲಕ್ಷ್ಮಿ ತೀವಿದಾ ಕತ್ತಲೆಗೆ ಬೇಸತ್ತು,
ಸಿರಿಗುರುಳಿರುಳ ಮುಡಿಯು ಕಿಡಿತಾರೆಗಳನಾಯ್ದು,
ರಕ್ತಾರುಣನ ಮಿಂಚೊಳದ್ದಿ, ಗೊಂಚಲ ನೆಯ್ದು,
ದೀವಟಿಗೆ ಹಿಡಿರೆಂದು ತರುಹಸ್ತಗಳಿಗಿತ್ತು
ಹೂವಿನ ಹಿಲಾಲುಗಳ ಹೊತ್ತಿಸಿರಲಲ್ಲಲ್ಲಿ
ಜ್ವಲಿಸುತಿವೆ ನೋಡದೊ ಅಶೋಕಹೂ ವೇಷದಲ್ಲಿ!

# ಸಂಜೆಗಿರಿಯಲಿ ಸಂಜೆ

ಸಂಜೆಗಿರಿಯಲಿ ಸಂಜೆ : ಯಾವ ದೊರೆ ನನಗೆ ಸರಿ ?
ಸ್ವರ್ಗದಲಿ ಕರುಬುತಿಹನಿಂದ್ರನೆನ್ನಂ ನೋಡಿ,
ಧೇನು ಸುರತರು ಸುರಾಂಗನೆಯರಂ ರೋಡಾಡಿ !
ಈ ನಿಸರ್ಗಶ್ರೀಗೆ ಮೇಣಾವ ಸಗ್ಗಸಿರಿ
ವೆಗ್ಗಳಂ ? ಪಂಕ್ತಿ ಪಂಕ್ತಿಗಳಾಗಿ ಕಣ್ದಿಟ್ಟೆ
ಸೋಲ್ವಂತೆ ಪರ್ಣಾರ್ಣವ ಮಹಾ ತರಂಗತತಿ
ಪ್ರಸರಿಸಿವೆ. ಗಿರಿಶಿವನೆದೆಯ ಮೇಲೆ ಶ್ಯಾಮಸತಿ
ಕಾನನ ಮಹಾಕಾಳಿ ತಾನಿಲ್ಲಿ ನಿತ್ಯನಟಿ !
ಸುಯ್ದಪಂ ಶಿಶಿರ ಶೀತಲ ಸುಖ ಸಮೀರಣಂ
ಮರ್ಮರ ಧ್ವನಿಗೈದು. ಸಾಂದ್ರ ಕಾಂತಾರದಲಿ
ಲಕ್ಷ ಮಧುಕರ ಪಕ್ಷಿರವದಿ ನಾದದ ಸಿಂಧು
ಮಸಗುತಿದೆ; ಸಂಜೆರವಿ, ಅದೊ, ವರುಣ ದಿಗ್ವಾರಣಂ
ತಾನೆನಲೆಸೆವ ಶೈಲ ಮಸ್ತಕಸುದೂರದಲಿ
ದಿಗ್ವಧೂ ಭ್ರೂಮಧ್ಯೆ, ಕಾಣ್, ರಂಗುಮಾಣಿಕ ಬಿಂದು!

# ಪರ್ವತಾರಣ್ಯಗಳಲ್ಲಿ

ನಗರದೆದೆಬೇಸರದ ಬೊಬ್ಬೆಗಾಂ ಬೇಸತ್ತು
ಬಂದಿಹೆನು ನಿನ್ನೆದೆಗೆ, ಓ ಸಹ್ಯಾದ್ರಿ, ಹಸಿದ ಶಿಶು
ತಾಯೆದೆಗೆ ಹುಡುಕಿ ಹರಿವಂತೆ. ಸಂತಸಗೊಳಿಸು,
ಸಂತವಿಸು, ಶಾಂತಿಯು ಸುಧೆಯು ತಂಪನೊಸೆದಿತ್ತು.
ಅಲ್ಲಿ ಸುಡುಬಿಸಿಲೊಂದೆ ಅಲ್ಲ: ಪುಸ್ತಕ ವಿದ್ಯೆ
ಬೇರೆ ದಹಿಸಿದೆ ಮನಕೆ ಸಂದೇಹದುರಿಯಿಕ್ಕಿ!
ಇಲ್ಲಿ ತೊಡಕಿನ ಕಬ್ಬು ಸೊಬಗುಗಾಣಕೆ ಸಿಕ್ಕಿ
ಮಧುರರಸವುಕ್ಕಿ ಹರಿವುದು ಕಂದರದ ಮಧ್ಯೆ!
ಬುದ್ಧಿಗತಿ ಸಂದೇಹ; ಹೃದಯಕೊ ಅತಿಶ್ರದ್ಧೆ.—
"ಅತಿಯು ತೊರೆ, ಮಿತಿಯಿರಲಿ; ಬುದ್ಧಿಹೃದಯಕೆ ಮಧ್ಯೆ
ನಡೆ" ಎಂಬೆಯೇಂ? ನಡೆದು ಕಂದಕಕೆ ಬಿದ್ದಿದ್ದೆ,
ಶೂನ್ಯಕ್ಕೆ! ಆ ಶೂನ್ಯವಿಕ್ಷುರಸನದಿಯಾಗಿ,
ಬುದ್ಧಿಹೃದಯದ ಮಧ್ಯೆ ಸವಿಯ ಸೇತುವ ತೂಗಿ,
ಹರಿಯುತಿಹುದಿಂದು, ಅರಿವಿರವಿನೊಂದಿಂಪಾಗಿ!

# ಕವಿಶೈಲ

## (೧)

ಓ ನನ್ನ ಪ್ರಿಯತಮ ಶಿಖರ ಸುಂದರನೆ, ನನ್ನ
ಜೀವನಾನಂದ ನಿಧಿ, ಕವಿತಾ ಮನೋಹರಿಯ
ಪ್ರಥಮೋತ್ತಮಪ್ರಣಯಿ, ವನದೇವಿಯೈಸಿರಿಯ
ಪೀಠ ಚೂಡಾಮಣಿಯೆ, ಕವಿಶೈಲವೇ, ನಿನ್ನ
ಸಂಪದವನೆನಿತು ಬಣ್ಣಿಸಲಳವು ಕವನದಲಿ?
ಬೆಳಗಿನಲಿ ಬೈಗಿನಲಿ ಮಾಗಿಯಲಿ ಚೈತ್ರದಲಿ
ಮಳೆಯಲ್ಲಿ ಮಂಜಿನಲಿ ಹಗಲಿನಲಿ ರಾತ್ರಿಯಲಿ
ದೃಶ್ಯವೈವಿಧ್ಯಮಂ ರಚಿಸಿ ನೀಂ ಭುವನದಲಿ
ಸ್ವರ್ಗವಾಗಿಹೆ ನನಗೆ! ನೀಲಗಿರಿ, ಬ್ರಹ್ಮಗಿರಿ,
ಗೇರುಸೊಪ್ಪೆಯ ಭೀಷ್ಮ ಜಲಪಾತ, ಆಗುಂಬೆ,
ಶೃಂಗೇರಿ, ಚಂದ್ರಾದ್ರಿಗಳನೆಲ್ಲಮಂ ಕಂಡೆ;
ವನರಾಜಿ ಜಲರಾಶಿ ಸೂರ್ಯಾಸ್ತಗಳನುಂಡೆ!
ಆದರೇಂ? ಮೀರಿರುವುದವುಗಳಂ ನಿನ್ನ ಸಿರಿ:
ಹೆತ್ತಮ್ಮಗಿಂ ಮತ್ತೊಳರೆ? ತಾಯಹಳೆ ರಂಭೆ?

# ಕವಿಶೈಲ

## ೩

### (೨)

ತೆರೆ ಮೇಲೆ ತೆರೆಯೆದ್ದು ಹರಿಯುತಿದೆ ಗಿರಿಪಂಕ್ತಿ
ಕಣ್ದಿಟ್ಟಿ ಹೋಹನ್ನೆಗಂ. ಚಿತ್ರ ಬರೆದಂತೆ
ಕಡುಹಸುರು ತಿಳಿಹಸುರು ಹಸುರು ಬಣ್ಣದ ಸಂತೆ
ಶೋಭಿಸಿಹುದಾತ್ಮವರಳುವ ತೆರದಿ. ದಿಗ್ದಂತಿ
ಕೊಂಕಿಸಿದ ದೀರ್ಘಬಾಹುವ ಭಂಗಿಯನು ಹೋಲಿ
ಮೆರೆದಿದೆ ದಿಗಂತರೇಖೆ. ಮುಳುಗುತಿದೆ ಸಂಜೆರವಿ
ಕುಂಕುಮದ ಚೆಂಡಿನೋಲು ದೂರದೂರದಲಿ. ಕವಿ
ಭಾವಮುಖನಾಗುತಿಹನಾವೇಶದಲಿ ತೇಲಿ!
ಬಳಿ ಕುಳಿತು ಭವ್ಯ ದೃಶ್ಯವ ನೋಡುತಿರುವೆನ್ನ
ಸೋದರನೆ, ಹೃದಯದಲಿ ಯಾವ ಭಾವಜ್ವಾಲೆ
ಪ್ರಜ್ವಲಿಸುತಿದೆ? ಮನದೊಳಾವ ಚಿಂತಾಗಾನ
ರೆಕ್ಕೆಗರ್ರಿಗೆದರುತಿದೆ? ಅಥವ ನೋಟವೆ ನಿನ್ನ
ಸರ್ವಸ್ವವಾಗಿದೆಯೆ? ಇರಲಿ! ನಿನ್ನೆದೆ ಸೋಲೆ
ಸೃಷ್ಟಿಸೌಂದರ್ಯಕದೆ ಅಮೃತಗಂಗಾಸ್ನಾನ!

# ಕವಿಶೈಲ

## (೩)

ನೋಡಯ್ಯ, ಪ್ರಿಯಬಂಧು, ಚೈತ್ರರವಿಯುದಯದಲಿ
ಸಹ್ಯಾದ್ರಿ ಕಾನನಗಳುತ್ತಮಾಂಗದಿ ಸೃಷ್ಟಿ
ದೃಶ್ಯ ವೈಕುಂಠವನೆ ನೆಯ್ದಿದೆ! ಕಲಾದೃಷ್ಟಿ
ದರ್ಶನವನುದ್ದೀಪನಂಗೈಯೆ ಹೃದಯದಲಿ,
ಪ್ರಾಣಪಕ್ಷಿಯಿದು ಸುವರ್ಣಪರ್ಣಂಗಳನು ಬಿಚ್ಚಿ
ಹಾರಿಹುದಸೀಮತೆಗೆ! ಕಣಿವೆ ಕಣಿವೆಗಳಲ್ಲಿ
ಮಂಜಿನ ಮಹಾಮಾಯೆ ನೊರೆಯ ರಾಸಿಯ ಚೆಲ್ಲಿ
ವಾರಿಧಿಯ ವಿರಚಿಸಿದೆ, ಕಟುನಿಮ್ನತೆಯ ಮುಚ್ಚಿ.
ನೋಡು, ಆ ಶಿಖರವೆದ್ದಿದೆ ದ್ವೀಪನೆಂಬಂತೆ
ಕ್ಷೀರಫೇನಧಿ ಮಧ್ಯೆ ಶ್ಯಾಮಲ ಶಿರವನೆತ್ತಿ;
ಸ್ವರ್ಗಪ್ರದೇಶದೊಂದಂಶವೆಂಬಂದದಿಂ!
ಪ್ರಿಯಬಂಧು, ಇದು ನಮ್ಮ ದೈನಂದಿನಿಳೆಯಂತೆ
ಕಾಣದೈ : ಸೌಂದರ್ಯ ದೇವತೆಗಳಿದೊ ಸುತ್ತಿ
ಬಿಗಿವರೆಮ್ಮನು ಬಾಹುಬಂಧನಾನಂದದಿಂ!

# ಕವಿಶೈಲ

## ೩

### (೪)

ಮಳೆಬಂದು ನಿಂತಿಹುದು; ಮಿಂದಿಹುದು ಹಸುರೆಲ್ಲ;
ಬಿಸಿಲ ಬೇಗೆಯು ಮಾದು, ಬಂದಿಹುದು ಹೊಸತಂಪು;
ಹೊಸತು ಮಳೆ ತೊಯಿಸಿರುವ ನೆಲದ ಕಮ್ಮನೆ ಕಂಪು
ತೀಡುತಿರೆ, ಮಣ್ಣು ತಿನ್ನುವುದೇನು ಮರುಳಲ್ಲ!
ವಾಯು ಮಂಡಲ ಶುಭ್ರ; ಗಗನದಲಿ ಮಬ್ಬಿಗಿಲ್ಲ;
ಮೈಲುತುತ್ತಿನ ಬಣ್ಣದಗಲ ಗಾಜನು ಹೋಲಿ
ಕಮನೀಯವಾಗಿರಲು ಧೌತಾಂಬರದ ನೀಲಿ,
ಕವಿಗೆ ಮನೆ ಬೇಡೆಂಬುದೊಂದು ಸೋಜಿಗವಲ್ಲ!
ಕರಿದಾಗಿ ಹಸರಿಸಿಹ ಕವಿಶೈಲದರೆಯಲ್ಲಿ
ಬಿಸಿಲಿನಲಿ ಮಿರುಗುತಿವೆ ಕನ್ನಡಿಗಳೆಂಬವೋಲ್
ನಿಂತ ನೀರುಗಳು; ಆವಿಗಳೆದ್ದು, ಅಲ್ಲಲ್ಲಿ,
ನಭಕೇರುತಿವೆ; ಹಕ್ಕಿ ಹಾಡತೊಡಗಿವೆ, ಕೇಳು!
ಹೇ ಬಂಧು, ಸೊಬಗಿನಲಿ ನಿನ್ನಾತ್ಮವನು ತೇಲು;
ಪ್ರಜ್ವಲಿಸಲ್ಕೆ ಕಲ್ಪನೆ ಕೆರಳ್ದ ಬೆಂಕಿಯೋಲ್!

# ಕವಿಶೈಲ

## ೩

### (೫)

ನಿರ್ಜನತೆ; ನೀರವತೆ; ಕಗ್ಗತ್ತಲಲಿ ಧಾತ್ರಿ
ತಲ್ಲೀನ. ಕೋಟಿಯುಡುಮಂಜರಿಗಳುಪಕಾಂತಿ
ಬೆಳಕಲ್ಲ: ಕತ್ತಲೆಯ ಛಾಯೆ, ಬೆಳಕಿನ ಭ್ರಾಂತಿ!—
ಏಂ ಶಾಂತಿ, ವಿಶ್ರಾಂತಿ!—ಕವಿಶೈಲದಲಿ ರಾತ್ರಿ:
ತಿಮಿರಪಾನದಿ ಮೂರ್ಛೆಗೊಂಡಂತಿಹ ಜಗತ್ತು
ಮರಳಿ ಕಣ್ದೆರೆದು ಎಚ್ಚರುವ ಚಿಹ್ನೆಯೆ ಇಲ್ಲ;
ಭೀಷಣ ಗಭೀರತೆಯೊಳದ್ದಿದೆ ಭುವನವೆಲ್ಲ;
ರಂಜಿಸಿದೆ ಲಯ ವಿಪ್ಲವದ ಭವ್ಯಸಂಪತ್ತು!
ದೇಹಭಾವವೆ ಹೋಗಿ ನನ್ನಹಂಕಾರಕ್ಕೆ
ಕತ್ತಲೆಯೆ ಕವಚವಾಗಿದೆ; ಇಂದ್ರಿಯಂಗಳಿಗೆ
ಕತ್ತಲೆಯೆ ವಿಷಯವಾಗಿದೆ; ನೋಡೆ ಕಂಗಳಿಗೆ
ಕತ್ತಲೆಯೆ ಕಾಣ್ಕೆ; ಕೇಳಲು ಕಿವಿಗಳೆರಡಕ್ಕೆ
ಕತ್ತಲೆಯೆ ಸದ್ದು!—ನನ್ನೆದೆಯೊಳನುಭವವೇನು?
ಭಯವೊ? ಆವೇಶವೊ? ಅಹಂಕಾರಲಯವೊ ಏನು?

# ಕವಿಶೈಲ

## ೮

### (೬)

ಮಿತ್ರರಿರ, ಮಾತಿಲ್ಲಿ ವ್ಯೈಲಿಗೆ; ಸುಮ್ಮನಿರಿ :
ಮೌನವೆ ಮಹತ್ತಿಲ್ಲಿ, ಈ ಬೈಗುಹೊತ್ತಿನಲಿ,
ಕವಿಶೈಲದಲಿ. ಮುತ್ತಿಬಹ ಸಂಜೆಗತ್ತಲಲಿ
ಧ್ಯಾನಸ್ಥಯೋಗಿಯಾಗಿದೆ ಮಹಾ ಸಹ್ಯಗಿರಿ !
ಮುಗಿಲ್ದೆರೆಗಳಾಗಸದಿ ಮುಗುಳ್ನಗುವ ತದಿಗೆಪೆರೆ,
ಕೊಂಕು ಬಿಂಕವ ಬೀರಿ, ಬಾನ್ದೇವಿ ಚಂದವಲಿ
ನೋಂತ ಸೊಡರಿನ ಹಣತೆಹೊಂದೋಣಿಯುಂದದಲಿ
ಮೆರೆಯುತ್ತೆ ಮತ್ತೆ ಮರೆಯಾಗುತ್ತೆ ತೇಲುತಿರೆ,
ಬೆಳಕು ನೆಳಲೂ ಸೇರಿ ಶಿವಶಿವಾಣಿಯರಂತೆ
ಸರಸವಾಡುತಿವೆ ಅದೊ ತರುತಲ ಧರಾತಲದಿ !—
ಪಟ್ಟಣದಿ, ಬೀದಿಯಲಿ, ಮನೆಯಲ್ಲಿ, ಸರ್ವತ್ರ
ಇದ್ದೆಯಿದೆ ನಿಮ್ಮ ಹರಟೆಯ ಗುಲ್ಲು ! ಆ ಸಂತೆ
ಇಲ್ಲೇಕೆ ?—ಪ್ರಕೃತಿ ದೇವಿಯ ಸೊಬಗುದೇಗುಲದಿ
ಆನಂದವೇ ಪೂಜೆ; ಮೌನವೆ ಮಹಾ ಸ್ತೋತ್ರ !

# ಕೊಳಲು

ಕಾಳಿದಾಸನ ಮಧುರ ಕಾವ್ಯಪ್ರಪಂಚದಲಿ
ರಾಮಗಿರಿ ನೆತ್ತಿಯಲಿ ವಿಧುರ ವಿರಹದಿ ನೊಂದು
ಜಡವ ಚೇತನಗೆತ್ತು ಯಕ್ಷನೊರ್ವನು ಅಂದು
ಮೇಘದೂತನ ಪ್ರಿಯೆಗೆ ಬಳಿಯಟ್ಟಿದಂದದಲಿ,
ಕೊಳಲಿನಿನಿದನಿ ಕುಣಿದು ಬರೆ ಕರ್ಣಲೋಕದಲಿ,
ವಿಹರಿಸುವೆ ಕಲ್ಪನಾವೃಷ್ಟಿದೂತನನಟ್ಟಿ
ರಾಸಲೀಲಾ ಮೋಹನಾಂಗನನು ಮೈಮುಟ್ಟಿ,
ರಾಧೆಗೋಪಿಯರೊಡನೆ ನೃತ್ಯದಾ ನಾಕದಲಿ.
ವಾಸ್ತವ ಜಗತ್ತು ಭಾವದ ಗಂಗೆಯಲಿ ತೇಲಿ,
ತಲ್ಲೀನವಾಗಿ ವಿಸ್ಮೃತಿಯ ಕಾಳಿಂದಿಯಲಿ,
ಮಗ್ನವಹುದಾನಂದವಾರಿಧಿಗೆ. ನೂರಾರು
ಕಾಮಧನುಗಳ್ ಸ್ವಪ್ನ ಸುಂದರಿಯರನು ಹೋಲಿ
ನರ್ತನಂಗೈದು ಬರೆ ಮೋಹಶೃಂಗಾರದಲಿ,
ಸಂಗೀತಸ್ರೋತದಲಿ ನಾನು ಬಣ್ಣದ ನೀರು !

# ಹೆಣ್ಣು

## ೧

ಪರಮ ಸಂಪೂರ್ಣತೆಯೆ ಕೋಮಲತೆಯೊಡಗೂಡಿ
ಸೌಂದರ್ಯರೂಪದಿಂದಿಳೆಗೆ ಬರಲದೆ ಹೆಣ್ಣು
ತಾನಾಗಿ ಮೋಹಿಸುತ್ತಿದೆ. ಕಬ್ಬಿಗನ ಕಣ್ಣು
ರೂಪಾಗ್ನಿರಾಶಿಗೆ ಪತಂಗದಂದದೊಳೋಡಿ
ಮುಗ್ಗುತಿದೆ, ಮೃತ್ಯುಮಾಧುರ್ಯಕ್ಕೆ ಮನಸೋತು :
ತುಟಿ, ಬಾಯಿ, ಕಣ್ಣು, ಮೈ, ಕೆನ್ನೆ, ಹಣೆ, ಹುಬ್ಬು, ಮುಡಿ,
ಪೆದೆಯೇರ್ದ ಬಿಲ್ಲಿನೆಪೆ, ಬಳ್ಳಿನಡು, ಮುತ್ತಿನಡಿ—
ಬ್ರಹ್ಮಶಿಲ್ಪಿಯ ಕೃತಿಗೆ ಕವಿಯ ಬಿರುದಿನ ಮಾತು !
ನಿನ್ನನುಳಿದಿರೆ ತಿರೆಯ ಬದುಕು ಮರುಧರೆ, ಸೊನ್ನೆ;
ಬಾಳ್ಗಿಡಕೆ ಜೀವನಂ ಹೂ ಹಣ್ಣು ಕಂಪಿಂಪು
ನೀನಲ್ತೆ, ಓ ನನ್ನ ನೀಲಿ ಸೀರೆಯ ಕನ್ನೆ ?
ಸಂಸ್ಕೃತಿಯ ರಸಿಕತೆಯ ಕಲೆಯ ಕಾವ್ಯದ ಪೆಂಪು
ನೀನಿರಲ್ಕಿಲ್ಲ ಸಾಧನೆಗೆ ನೀಂ ಫಲಂ, ಸಿದ್ಧಿ !
ನೀನಿಲ್ಲದಿಹ ತಪಕಿಹುದೆ ಶುದ್ಧಿ, ಮೇಣ್ ಬುದ್ಧಿ ?

# ರಸವೊಂದೆ ಕವಿಗೆ ನೀತಿ

ಸೋತೆನ್ ; ಎನ್ನಿಂದಾಗದಿನ್ ಮೇಲೆ ; ಗುರುದೇವ,
ಮನ್ನಿಸೆನ್ನನ್. ಹಿಂದೆ ಹೇಳ್ದನಲ್ಲವೆ ಯೇಸು :
" ಕುದಿಯುವುದಕಿಂತಲೂ ಮದುವೆಯಪ್ಪುದೆ ಲೇಸು."
ಸಂಯಮದ ಹೆಮ್ಮೆಯಾ ಸಗ್ಗದಾಸೆಗೆ ನೋವ
ನರಕದಿ ತಪಂಗೈದೆನಿದುವರೆಗದುವೆ ಸಾಕು.
ಎನ್ನ ಹಂಕೃತಿ ಬೆಳೆಗೆ ಹೆರರ ಮೆಚ್ಚುಗೆ ಬೇಲಿ,
ನಿಂದೆಯೆಂಬುದೆ ಪಹರೆ. ಅಯ್ಯೊ, ಸೆರೆಯನೆ ಹೋಲಿ
ಬಾಳ್ದ ಬದುಕಿದು ಸಾಕು. ಇನ್ನು ಬಿಡುಗಡೆ ಬೇಕು,
ಬಿಡುಗಡೆಯು ಬೇಕೆಂಬ ಮೋಕ್ಷ ಬಂಧನದಿಂದೆ!
ಹೊನ್ನಾದರೇನು ? ಕಬ್ಬಿಣವಾದರೇನು ? ಮಿಣಿ
ಎಂದಿಗೂ ಬಂಧನವೆ! ನೀತಿಫಣಿ ಗರುಡಮಣಿ
ತಾನಲ್ತೆ ಕವಿಯ ರಸಹೃದಯ? ಕೇಳ್ :—ರಸವೊಂದೆ
ನಿಯತಿಕೃತ ನಿಯಮ ರಹಿತನ್ ಕವಿಯೆನಗೆ ನೀತಿ;
ಹ್ಲಾದವೆ ಪರಮ ಧರ್ಮವುಳಿದುದೆಲ್ಲಂ ಭೀತಿ!

# ಪ್ರೇಮಕ್ಕೆ

ಕಬ್ಬಿಗಗೆ ನಿನ್ನೆದೆಯೆ ಕಟ್ಟಕಡೆಯಾಶ್ರಮಂ,
ಮೋಕ್ಷೋತ್ತಮಾಶ್ರಯಂ. ಗಂಧ ಶೀತಲವಾರಿ
ಜೆಂದು ಬಂದೆನಗೆ ನೀಂ ; ಮಿಕ್ಕುದೆಲ್ಲಂ ದಾರಿ,
ಮನೆಯಲ್ತು. ಸಾಲ್ಗುಮಿನ್ನೆನಗಾ ವೃಥಾಶ್ರಮಂ
ಮನಸಿನಾ ವ್ಯರ್ಥ ವಿಚಿಕಿತ್ಸೆ! ವಿಜ್ಞಾನಕ್ಕೆ
ತತ್ತ್ವಕ್ಕೆ ಕಾವ್ಯಕ್ಕೆ ಪ್ರಕೃತಿ ಸೌಂದರ್ಯಕ್ಕೆ
ಭೋಗಕ್ಕೆ ತ್ಯಾಗಕ್ಕೆ ಮೇಣ್ ಬ್ರಹ್ಮಚರ್ಯಕ್ಕೆ
ಪ್ರೇರಕಂ ಪರಮಗತಿ ಸರ್ವಮುಂ ನೀನಕ್ಕೆ!
ಪ್ರೇಮಾವತಾರಿಣಿಯೆ, ಓ ನನ್ನ ಹೇಮಾಕ್ಷಿ,
ನಿನ್ನಪ್ಪುಗೆಯೆ ನನಗೆ ಸತ್ಯಸ್ಯ ಸತ್ಯಮಂ
ತೋರ್ಪುದಾನಂದಮಂ, ಮಿಕ್ಕೆಲ್ಲ ಮಿಥ್ಯಮಂ
ವಿಸ್ಮೃತಿಯೊಳದ್ದಿಲ್ಲಗೈದು! ಪ್ರೇಮವೆ ಸಾಕ್ಷಿ
ಪರಮಾತ್ಮನಿರವಿಂಗೆ ಮೇಣವನನುಭವಕ್ಕೆ :
ನನ್ನ ಸಾಧನೆಯನಿತು ನಿನ್ನ ನೈವೇದ್ಯಕ್ಕೆ!

# ಮಾಯೆ—ಮುಕ್ತಿ

ಮರುಭೂಮಿ ಮಾರ್ಗದಲಿ, ವೈರಾಗ್ಯ ಸಾಧನದಿ
ಮುಕ್ತಿ ?—ನಾನದನೊಲ್ಲೆ. ಅದು ನನ್ನ ಪಥವಲ್ಲ ;
ರಸ ತಪಸ್ವಿನ ಕವಿಯ ದರ್ಶನದ ಮತವಲ್ಲ.
ಸೌಂದರ್ಯ ಮಾಧುರ್ಯ ಸಮ್ಮೋಹ ನಂದನದಿ,
ಮಾಯಾ ಜಗತ್ತಿನ ಸಹಸ್ರಾರು ಬಂಧನದಿ,
ಮಳೆಬಿಲ್ಲಿನಲಿ ಬಣ್ಣಗಳು ರಮಿಸುವಂದದಿಂ,
ನಲಿಯುವೆನು ಹಾಸುಹೊಕ್ಕಾಗಿ. ಆನಂದದಿಂ
ಬಂಧನದ ನಾಡಿಯಲಿ ಹರಿಯುತಿದೆ ಮುಕ್ತಿನದಿ.
ತ್ಯಾಗ ತಾನೊಂದು ಕೈ, ಭೋಗ ತಾನೊಂದು ಕೈ ;
ಯೋಗಿಕವಿ ಪರಿಯೆ ರಾಗಾಲಿಂಗನಕೆ ನೀಡಿ,
ಥಕ್ಕಥೈ ಎಂದು ಕುಣಿದ್ವೈತಹುದೊ ಮುಕ್ತಿಮೈ,
ಮೈ ಮೈಯ ಕೈ ಕೈಯನಪ್ಪಿ ಚುಂಬನಗೂಡಿ.
ನಿನಗೆ ಮಾಯಾ ಮೋಹದಂತೆಸೆವ ಪ್ರೇಯಸ್ಸು
ನನಗೆ ತಾನಹುದು ಮುಕ್ತಿಯ ಪರಮ ಶ್ರೇಯಸ್ಸು.

# ಕ್ಷೇಮಕಾರಿ

ನನ್ನ ಹಿತಕೇನು ಬೇಕೆಂಬುದನು ನೀ ಬಲ್ಲೆ
  ನನಗಿಂತಲೂ ನೂರುಮಡಿ ಲೇಸು : ನನ್ನಕ್ಷಿ
  ತಾತ್ಕಾಲಿಕಂ. ರುಚಿಯೆ ಪಥ್ಯವೆಂದೆನೆ, ಕುಕ್ಷಿ
ವೈದ್ಯನಾದಂತೆ ! ರುಚಿಮಾತ್ರ ಸುಖಕಾನೊಲ್ಲೆ.
ನಾನು ಪರತಂತ್ರನಹೆ ನಿನ್ನ ಸ್ವಾತಂತ್ರ್ಯದಿಂ ;
  ನನ್ನ ಸ್ವಾತಂತ್ರ್ಯದಿಂ ನಿನ್ನ ಬಲ್ಮೆಗೆ ಕುಂದು.
  ನಮ್ಮಿಚ್ಛೆಗಳು ಪರಸ್ಪರತಂತ್ರವಾದಂದು
ತೊಡಕೆಲ್ಲ ಮಾಯೆಯಾಗುವುದೊಲುಮೆ ಮಂತ್ರದಿಂ.
ನನ್ನ ಕಣ್ ಮೊದಲು ಬೆಳಕನು ಕಂಡ ಕಾಲದಿಂ
    ಬನ ಬಾನು ತಳಿರು ಹೂ ಹಣ್ಣು ಹಾಲಂತಾಗಿ
  ಸತ್ಕರಿಸುತಿಹೆ ನೀನು, ಲೋಕ ಮೋಹಕ ಮೂರ್ತಿ.
ನಿನ್ನ ಕೈ ನನ್ನ ಕಲ್ಪನೆಯ ಪಾತಾಳದಿಂ
    ದೋಟಿಯುಂದದಿ ಮೂಡೆ, ಕಲ್ಪವೃಕ್ಷಂ ಬಾಗಿ
  ಕುಸುಮ ಕೋಟಿಯು ಕರೆವುದದುವೆ ಜೀವಸ್ಫೂರ್ತಿ !

# ಸಂಸ್ಕಾರ ಸರ್ಪಿಣಿ

ನಿನ್ನ ಕರುಣೆಯ ಕಯ್ಯೆ ನನ್ನ ಸಿರಸಿನ್ನೆಗಂ
   ಪಿಡಿದು ನಡೆಸಿಹುದಾದೊಡಂ, ಏಕಿಂತು ಶಂಕೆ
   ಅಶುಭದಾ ? ಕೆರಳಿತೆನೆ ಕವಿಕಲ್ಪನೆಯ ಬೆಂಕೆ,
ಮಂಗಳದ ಮಧ್ಯೆ, ಸಾಸಿರ ಸಿರದ ಪನ್ನಗಂ
ವಕ್ರವಿಕೃತಿಯ ಬಹು ವಿಧದ ದುಃಖಫಣೆಗಳಂ
   ಬೆದರಿಸುವುದೆತ್ತಿ. ಕಂಡರಿಯದಾವುದೊ ಭೀತಿ
   ಬೆಬ್ಬಳಿಪುದಾತ್ಮಮಂ : ಪೂರ್ವ ಜನ್ಮಗಳೀತಿ,
ಶೋಕ ಸಂಕಟ ಮರಣ ವಿರಹಸ್ಮರಣೆಗಳಿಂ
ಸುಪ್ತಸ್ಮೃತಿಯ ಹೇಳಿಗೆಯ ಬಾಗಿಲಂ ಬಿರಿದು,
   ಸುರುಳಿ ಸುತ್ತಿಹ ಕುಂಡಲಿನಿಯಂ ಸುಷುಪ್ತಿಯಿಂ
ಮೆಲ್ಲನೆಳ್ಚರಿಸುವುದೊ ಕಾಣೆ !— ಬೆಂಕೆಯೊಳುರಿದು
   ಬೆಂದ ನೆನಹೋ ? ಬೇಟವೆಣ್ಣೊಡನೆ ತೃಪ್ತಿಯಿಂ
ಪುಲ್ಮೇಯುತಿರೆ ಮಡಿದ ಮೃಗಯಾ ಭಯಂಕೃತಿಯೊ ?
ಯಾವ ಜನ್ಮದ ಯಾವ ದುರ್ಗತಿಯೊ, ದುಃಸ್ಮೃತಿಯೊ?

# ಹಗಲುಗನಸು

ಎತ್ತ ಸುತ್ತಿದರೇನು ನನ್ನ ಹೃದಯದ ಹಕ್ಕಿ
ಹಾರೋಡುತಿದೆ ನಿನ್ನೆದೆಗೆ ಮತ್ತೆ ಮೋಣ್ಮತ್ತೆ,
ಓ ನನ್ನ ಪ್ರಿಯದರ್ಶಿ! ಹಸುಳೆ ಹಸಿವೆಗೆ ಸಿಕ್ಕಿ
ತಾಯ್ಮೊಲೆಯನರಸುವಂದದಿ ನಿನ್ನನರಸುತ್ತೆ
ಕಾಲದೇಶಗಳೆಲ್ಲೆಯನು ಕೊಕ್ಕಿನಿಂ ಕುಕ್ಕಿ
ಬಿರಿದೊಡೆದು ನನ್ನಾತ್ಮವಲೆಯುತಿದೆ. ಓ ಮಿಥ್ಯೆ,
ವಿರಹ ಜಿಹ್ವೆಗೆ ಜೇನು ನೀನಲ್ತೆ? ಎದೆ ಸುಕ್ಕಿ
ಬೇಯುತಿರೆ, ಮಳೆಗರೆದು ತಂಪಿನಮೃತವನಿತ್ತೆ!
ರಮಣೀಯ ಸೀಮೆಸೇವಂತಿಗೆಯ ಹೂದೋಟ:
ರತಿಯಧರ ರುಧಿರ ಬಿಂದುವಿನಂದದಿ ಗುಲಾಬಿ!
ಎಳೆಯ ಹೊಂಬಿಸಿಲಿನಲಿ ಹಸಲೆಯಿಬ್ಬನಿ ನೋಟ:
ಆದರೇಂ? ನೀನಿಲ್ಲದೆನಗೆಲ್ಲವೂ 'ಗೋಬಿ'!
ಹೊರಗೆ ನೋಡುವ ಇಚ್ಛೆಯಣಮಿಲ್ಲ: ಕಣ್ಮುಚ್ಚಿ
ಹಾರುತಿದೆ ನಿನ್ನೆಡೆಗೆ ಕಲ್ಪನೆ ಗರಿ ಬಿದಿರ್ಚ್ಚಿ!

# ಅಗಲಿಕೆಯ ಹಂಬಲು

ನೀನೆನ್ನ ನೆನೆಯುತಿಹೆಯೇನು ಈ ಹೊತ್ತಿನಲಿ
ನಾ ನಿನ್ನ ನೆನೆಯುತಿರುವಂತೆ, ಓ ಎದೆಯನ್ನ ?
ನಾನರಿಯೆನಾದರೂ ಇಂತು ಚಿತ್ರಿಸಿ ನಿನ್ನ
ನಲಿಯುವೆನು ಮನದಿಂಪಿನಿಂದೆ : ಮಲೆನೆತ್ತಿ ಬಳಿ
ಕಲ್ಲರೆಯ ಮೇಲೆ ಮೊರೆಯುವ ತೊರೆಯ ಮುಕುರದಲಿ
ತಳತಳಿಸಿ ತಿಂಗಳಿರೆ ನುಣ್ಣನೆರಚಿದ ಜೊನ್ನ
ಸಿಂಗಾರದಲಿ ತೆರೆತೆರೆಗೆ ಹಬ್ಬಿ, ನೀನೆನ್ನ
ಕಂಡಲ್ಲಿ ಕೊರಳೆತ್ತೆ : ತುಂಬುಪೆರೆ ಬಾನಿನಲಿ
ಮುಗುಳು ನಗುತಿದೆ ವಿರಳ ನಕ್ಷತ್ರವೃತವಾಗಿ
ಬೆಣ್ಣೆಹತ್ತಿಯ ಹಿಂಜಿದುಣ್ಣೆ ಮುಗಿಲಿನ ಮಧ್ಯೆ,
ಬಿಳಿ ಸೀರೆಯುಟ್ಟೆನ್ನ ತೊಡವಿಟ್ಟ ಮೊಗದಂತೆ!
ತೀಡುವುದು ತಣ್ಣೆಲರು ಇರುಳ ತೊಟ್ಟಿಲ ತೂಗಿ;
ತುಂಬುವುದು ವಿಶ್ವವನು ನಿಶ್ಶಬ್ದತೆಯ ನಿದ್ದೆ;
ಮಲರುವುದು ಕನಸಾಗಿ ಬೇಟದಿನಿಯಳ ಚಿಂತೆ!

# ನನ್ನ ದೇವರು ನೀನು

ನಾ ನಿನ್ನ ಬಿಡೆನಯ್ಯ, ನನ್ನ ದೇವರು ನೀನು :
ನೀನೊಡನೆ ಇರಲು ಮರುಧರೆ ನಂದನೋದ್ಯಾನ ;
ನೀನಿಲ್ಲದುದ್ಯಾನವದುವೆ ಮರುಧರೆ ಕಾಣ.
ನಿನ್ನ ಬಿಟ್ಟರೆ ಹರಣವನು ತೊರೆದ ಶವ ನಾನು !
ನನ್ನೆದೆಯ ನೈಲಿಗೆಯ ನಿನ್ನೊಲುಮೆ ಕಣ್ಣೀರು
ತೊಳೆಯುತಿದೆ. ನನ್ನ ಚೈತನ್ಯದೀಪದ ಬತ್ತಿ
ನಿನ್ನ ಸೌಂದರ್ಯ ಸಂಸರ್ಗ ಮಾತ್ರದಿ ಹೊತ್ತಿ
ಉರಿಯುತಿದೆ. ನನ್ನ ಬಾಳಿನ ತಾವರೆಯ ತೇರು
ಸಾಗುತಿದೆ ನಿನ್ನ ಶೃಂಗಾರ ರಂಗದ ಮೇಲೆ
ಸುಖದ ಮಂದಾಕಿನಿಯ ರಸಸಲಿಲದಲಿ ತೇಲಿ
ತೇಲಿ. ನನ್ನೆಳೆತನಕೆ ಕರುಣೆದೊಟ್ಟಿಲ ತಾಯಿ;
ಬಾಲ್ಯದಾಟಂಗಳಿಗೆ ಒಡನಾಡಿ ; ಉಯ್ಯಾಲೆ
ತರುಣತೆಗೆ ; ಕೇಲಿ ಯೌವನಕೆ ; ಮರಣಕೆ ಕಾಳಿ ;
ಓ ಚಿರಸುಧಾ ಮೂರ್ತಿ, ನನ್ನ ಕೈಹಿಡಿ, ಕಾಯಿ !

# ಕಲೆ ಮತ್ತು ನೀನು

ನನ್ನ ಕಲೆ ನಿನ್ನ ಸೌಂದರ್ಯದೈಹಿಕ ಛಾಯೆ.
 ಗಿಳಿಯು ಕಾಣದ ಹಸುಳೆ ಲೆಪ್ಪದ ಗಿಣಿಯು ಕೊಂಡು
 ನಲಿವಂತೆ, ನಿನ್ನ ಪಡಿ ನಿನ್ನ ನೆರಳನು ಕಂಡು
ಬೆಮೆಗೊಂಡೆ. ಕಲೆಯಾದರೇನು? ಮೂರ್ತಿಯು ಮಾಯೆ
ಮಾಯೆ! ಮಗುವರಿಯದಿರೆ ಬಲ್ಲವಂಗರಿದೇನು?
 ಗಿಳಿಯಲ್ಲ ಗೊಂಬೆಗಿಣಿ; ಸೌಂದರ್ಯವಲ್ಲ ಕಲೆ.
 ಕಲೆ ನನ್ನಿಗೊರ್ ದಾರಿ; ನನ್ನಿ ಸೊಬಗಿಂಗೆ ನೆಲೆ.
ಕಲೆಯಾಚೆ ನಿತ್ಯ ಸೌಂದರ್ಯವಾಗಿಹೆ ನೀನು.
ಕಸದ ನೆರಳನು ಕೆಲರು ಪೊರಕೆಯ ನೆರಳಿನಿಂದೆ
 ಗುಡಿಸಲನುಗ್ರೈಯುವರು! ನಿನ್ನ ಛಾಯೆಯು ತೋರಿ
 ತಿಮಿರಮಾಯೆಯ ಗೆಲ್ಲುವರೆ? ಹುಸಿ! ಕಲೆಯು ಹೀರಿ
ಮೀರಿಹುದು ಸತ್ಯ ಸೌಂದರ ಮಂದಿರಂ ಮುಂದೆ.
 ನಿನ್ನ ಪಡೆದರೆ ನನ್ನ ಚಿರಸಖಿ ಕಲೆಯು ಕನ್ನೆ;
 ಎಲ್ಲ ಪಡೆದೂ ನಿನ್ನ ಪಡೆಯದಿರೆ ಬರಿಸೊನ್ನೆ!

# ಕವಿಯ ಮನಸ್ಸು

ಕ್ಷಣಕ್ಷಣಕೆ ವರ್ಣಾಂತರವನಾಂತು ಮಳೆಬಿಲ್ಲು
ತೊರೆಹರಿಯುತಿಹುದು, ಚಿರ ಚೈತ್ರ ನಂದನ ವಾಸಿ;
ಪಳುಕಿನರೆ, ಹೊಮ್ಮಳಲು ; ನವರತ್ನಗಳೆ ರಾಶಿ
ರಾಶಿಯಾಗಿಹ ಬಣ್ಣಬಣ್ಣದ ಹರಳುಕಲ್ಲು ;
ಸ್ವರ್ಗಸುಂದರಿಯರ ಜಲಕ್ರೀಡೆ ; ಹೂ ತುಂಬಿ
ಕಂಗೊಳಿಸುವಂಚಿನೆಡೆ ಪರಪುಟ್ಟನಿಂಚರಂ,
ಗಿಳಿಗಳುಲಿ, ಮಿಂಚುವ ಪತಂಗಂ, ಮನೋಹರಂ
ಮೋಹನ ಮಯೂರಲಾಸ್ಯಂ, ಝೇಂಕೃತಿಯ ದುಂಬಿ!—
ಪ್ರಾಚೀನತೆಯ ಜೀವ ಸಾರ ಸತ್ವವ ಹೀರಿ,
ಭಾವದೇದೀಪ್ಯವರ್ವಾಚೀನತೆಯ ಮೂರ್ತಿ,
ತಾಪಸಂ, ವೀಚಿದೋಲಿತ ಜಲರುಹದ ಮೇಲೆ
ಮೆರೆದಿರೆ; ನವೀನತೆಯ ನಿಟಿಲನಯನ ಜ್ವಾಲೆ
ಪ್ರಾಕ್ತನದ ನೀರಸ ಕಳೇಬರವನುರಿದೋರಿ
ದಹಿಸುತಿರೆ—ತಾನದಲ್ಲವೆ ಕವಿಮನದ ಕೀರ್ತಿ !

# ಕವನಗಳೆ ಮಂತ್ರಗಳು

ಕವನಗಳೆ ಮಂತ್ರಗಳು ರಸಯೋಗಿ ಕವಿಋಷಿಗೆ ;
ಕವನಗಳೆ ದೇವಾಲಯಂ. ಕವನಗಳೆ ಪಾತ್ರೆ
ಋಷಿವರಾನುಭವಗಳಿಗೆ. ತೀರ್ಥಗಳವ್ಮೃತಯಾತ್ರೆ
ಕವನ ಪಠನಂ. ಕವನಗಳೆ ವೇದಮನುಭವಿಗೆ!
ಕವನ ರಚನೆಯೆ ಪೂಜೆ ; ಕವನ ಗಾನವೆ ಭಕ್ತಿ.
ಕವನ ಮಂತ್ರದಿ ಸೃಷ್ಟಿ, ಕವನ ಮಂತ್ರದಿ ಲಯಂ ;
ದೇವ ದೇವ ಪ್ರಾಣಕಂಪನ ರಸಾಲಯಂ !
ಕವನಗಳೆ ಭುಕ್ತಿ ಮೇಣತ್ಯಂತ ಸುಖಮುಕ್ತಿ !
ಕವನ ಕಾನನ ಪಂಕ್ತಿ ; ಕವನ ಪರ್ವತಧಾತ್ರಿ ;
ಕವನ ನೀಲಾಂಭೋಧಿ ; ಕವನ ನೀಲಾಂಬರಂ ;
ಕವನ ರವಿ ; ಕವನ ಶಶಿ ; ಕವನ ತಾರಾರಾತ್ರಿ ;
ಕವನ ಶಿವನುನ್ಮಾದ ತಾಂಡವಾಡಂಬರಂ !—
ಪಾಂಡಿತ್ಯದರ್ಪಫಣಿಗಿದು ಕಾವ್ಯಗರುಡಮಣಿ :
ಕವಿಗೊರ್ವನಿಗೆ ಸಾಧ್ಯ ; ಕವಿಗೊರ್ವನಿಗೆ ವೇದ್ಯ !

# ಖಗೋಲ ವಿಜ್ಞಾನದ ಪ್ರಥಮಪರಿಚಯ

ಭ್ರಮಿಸುತಿದೆ ಮತಿ; ಬೀಳುತಿದೆ ಕಲ್ಪನೆಯ ಪಕ್ಷಿ
ಹಾರಲಾರದೆ ಹಾರಿ ತತ್ತರಿಸಿ! ಓ ವಿದ್ಯೆ,
ನಕ್ಷತ್ರ ನೀಹಾರಿಕಾಗ್ನಿ ತೀರ್ಥದ ಮಧ್ಯೆ
ಮಿಂದು ಉರಿವೆಯ್ವಡೆದ ನೀನು ಮೂರನೆಯಕ್ಷಿ
ನನ್ನಾತ್ಮ ಶಿವಲಲಾಟಕ್ಕೆ. ‘ ಬೆಳಕಿನ ವರ್ಷ ’
ಕೋಟಿಕೋಟಿಯನಲೆದು, ಕಾಲದೇಶಾನಂತ
ವಿಶ್ವದೊಳಿಳಿದು, ಮೂರ್ಛೆಹೋಗುತಿಹುದೀ ಭ್ರಾಂತ
ಮಮತೆ : ಮಾನುಷತೆಗಾಗಿದೆ ಬ್ರಹ್ಮತಾ ಸ್ಪರ್ಶ !
ನನ್ನ ಮೈ, ನನ್ನೂರು, ನಾಡು, ಸಂಸ್ಕೃತಿ, ಬಲುಮೆ
ಎಂಬ ಮುದ್ದಿನ ಮೋಹಗಳಿಗೆಲ್ಲ ನೀ ಮದ್ದು,
ಓ ಖಗೋಲದ ವಿದ್ಯೆ ; ಬಡಬಾನಳನ ಕುಲುಮೆ
ಮೌಢ್ಯಕಿಲ್ಬಿಷಕೆ! ಬಾವಿಯ ಕಪ್ಪೆಯಾಗಿದ್ದು
ಹೆಮ್ಮೆ ಪಡುತಿದ್ದೆನ್ನನೊಮ್ಮೆಯೆ ಸಮುದ್ರಕ್ಕೆ
ಬೀಸಿದಂತಿದೆ : ಯಾತ್ರೆ ಮಹತೋಮಹೀಯಕ್ಕೆ !

# ನನ್ನ ಶೈಲಿ

ನನ್ನ ಭಾವದ ಧೀರ ಭಾರಕ್ಕೆ ವೇಗಕ್ಕೆ
ಚಟುಲ ರಣತೇಜಿ ಈ ಭೀಮಸುಂದರಶೈಲಿ :
ಹತ್ತದನು ನೀನೆಲವೊ ನೆತ್ತರಿದ್ದರೆ ಮೈಲಿ !
ಬಡಕಲಾದವಗೆ ನಾಗಾಲೋಟದಿಂ ಪಕ್ಕೆ
ನಿರಿನಿಟಿಲು ಮುರಿದಪ್ಪುದಸ್ಥಿ ಚೂರ್ಣದ ಥೈಲಿ.
ಕೈಲಾಗದೆಯೆ ಹತ್ತಿ ಮೈ ನೊಂದರೇಂ ತಪ್ಪೆ
ಕುದುರೆ ? ಮೈ ಕೊಬ್ಬೆಂದು ದೂಷಿಸುವೆ! ಬಿಡು, ಬೆಪ್ಪೆ,
ನಿನಗಲ್ಲವೀ ತೇಜಿ—ಈ ದೈತ್ಯ ಕವಿಶೈಲಿ !
ನಿನ್ನ ಭಾವದ ಮೆಯ್ಯ ಪುಷ್ಟಿಗೊಳಿಸೈ ಮೊದಲು ;
ತೋರ್ಪುದಾಗೆನ್ನ ಶೈಲಿಯ ಮಹಿಮೆ. ಭೂರ್ಭುವನ
ಸ್ವರ್ಗಂಗಳಂ ಯಾತ್ರೆಗೈಯುವೆನ್ನಯ ಕವನ
ಬಯಲು ಸೀಮೆಯ ದೃಶ್ಯ ಕಾರ್ಪಣ್ಯತೆಗೆ ಬದಲು
ಮಲೆನಾಡಿನಡವಿ ಮೈಸಿರಿಯ ವಿನ್ಯಾಸಮಂ
ನೋಂತಿದೆ, ತೊರೆದು ನಪುಂಸಕರ ಸಂನ್ಯಾಸಮಂ !

# ರಸಸಿದ್ಧಿ

ಗಗನವನು ನೋಡು ಮೈ ನೀಲಿಗಟ್ಟುವವರೆಗೆ.
ಕಡಲನೀಕ್ಷಿಸು ವಾರಿರಾಶಿ ಧಮನಿಗಳಲ್ಲಿ
ಧುಮ್ಮಿಕ್ಕಿ ಮೊರೆವನ್ನೆಗಂ. ಕಟ್ಟಿರುಳಿನಲ್ಲಿ
ನೀನೆ ಕತ್ತಲೆಯಾಗಿ, ನಿನ್ನೊಳಗೆ ಮಿರುಮಿರುಗೆ
ಕೋಟಿ ಸಂಖ್ಯೆಯ ತಾರೆಯನ್ನೆಗಂ ಧ್ಯಾನಗೈ.
ಕೇಳು, ಸುಗ್ಗಿಯಹಕ್ಕಿ ಕರೆಯೆ ಸಗ್ಗವ ಕೂಗಿ,
ಮೆಯ್ಯ ನೆತ್ತರುಮೆಲ್ಲಮಿಂಚರದ ಹೊನಲಾಗಿ.
ಸರ್ವ ಸೃಷ್ಟಿಯನೊಂದೆ ಮುಕ್ಕುಳಲಿ ಪಾನಗೈ!
ವಿಶ್ವವಿದು ನಿನ್ನಾತ್ಮದಾ ಕಾಲದೇಶದಲಿ
ನಿನ್ನ ಮೈಯಾಗಲಿ :—ವಸುಂಧರೆ ಹೃದಯವಾಗಿ.
ವಿಸ್ತೃತ ಸಮುದ್ರಗಳೆ ಶ್ವಾಸಕೋಶಗಳಾಗಿ,
ತೇಲಲಿ ಜಗತ್ತು ರಸಸಿದ್ಧಿಯಾಕಾಶದಲಿ
ಒಂದು ಎರಡೆಂದೆಂಬ ಹುಸಿಯನೆಲ್ಲವ ಬಿಟ್ಟು :
ಉಳಿಯಲೆಂಪೆಂದಿಗೂ ಮೂಕವಾಗಿಹ ಗುಟ್ಟು!

# ನನ್ನ ಕವಿತೆ ತನ್ನ ವಿಮರ್ಶಕನಿಗೆ

ನೀನೇರಬಲ್ಲೆಯಾ ನಾನೇರುವೆತ್ತರಕೆ?
  ನೀ ಹಾರಬಲ್ಲೆಯಾ ನಾ ಹಾರುವಗಲಕ್ಕೆ?
  ನೀ ಮುಳುಗಬಲ್ಲೆಯಾ ನಾ ಮುಳುಗುವಾಳಕ್ಕೆ?
ಇಲ್ಲ? ನಡೆ, ದೂರಸರಿ! ಹೌದು? ಬಾ, ಹತ್ತಿರಕೆ!
ನಿನ್ನ ನಾಡಿಯಲಿ ಕೆನ್ನೆತ್ತರು ಹಸುರ್ಗಟ್ಟಿ
  ನೋಡುತಿರೆಯಿರೆ ನೀನೆ ನೋಡುವಾ ಮರವಾಗಿ
  ತೆಂಗಾಳಿಯಲಿ ತಳಿರ ತೊಂಗಲ ತಲೆಯ ತೂಗಿ
ನಲಿವನ್ನೆಗಂ ದೂರ? ಬಳಿಕ ಬಾ ಮೈಮುಟ್ಟಿ.
ಭಾವ ಬುದ್ಧಿಗಳಮಲ ವಿದ್ಯುದಾಲಿಂಗನಕೆ,
  ಹೃದಯಾಗ್ನಿಸ್ಪರ್ಶಕ್ಕೆ, ಜಡವೆಲ್ಲ ಕಿಡಿಯಾಗಿ
  ಹುಡಿಮಣ್ಣು ಮಿಂಚುವುದೆ ಚೇತನದ ಗುಡಿಯಾಗಿ?—
ಎನಿತು ಹಿರಿದಾದರೂ ನಿನ್ನ ಪಂಡಿತತನಕೆ
  ನಿಲುಕೆನ್ನೈ : ನಾನು ಆನಂದ-ಉನ್ಮಾದಿನಿ,
  ದಿವ್ಯಾನುಭೂತಿ ಸಂಭೂತ ರಸವಾಹಿನಿ!

# ಕವನ ಕೇಳುವವನಿಗೆ

ನೋಯುವುದೊ ಬೇಯುವುದೊ ಸಾಯುವುದೊ ನನ್ನ ಎದೆ,
ಭವ್ಯಕವನವ ನಿನಗೆ ನಾನುಲಿಯುತಿರಲೋದಿ,
ನಿನ್ನ ಮುಖ ಕಣ್ಗಳಲಿ ಭಾವನೋಜ್ವಲ ಬೋಧಿ
ಹೊಳೆಹೊಳೆದು ತೊಳಗದಿರೆ. ಅದೆ ಘೋರ ಕಾವ್ಯವಧೆ !
ನಿನಗರ್ಥವಾಗುತಿದೆ ? ಹಾಳು ಹೆಣವಾ ಅರ್ಥ !
ನಾಬಲ್ಲೆ ನೀನೊಂದು ಪಂಡಿತ ನಿಘಂಟೆಂದು ;
ಸುಪ್ರೌಢವ್ಯುತ್ಪತ್ತಿ ವ್ಯಾಕರಣವುಂಟೆಂದು !—
ರಸದೃಷ್ಟಿ ಬಾಹಿರನಿಗೇಸಿದ್ದರೂ ವ್ಯರ್ಥ !
ವಾಗ್ದೇವಿ, ನಿನಗಿದೋ ಬಡಕವಿಯ ಪ್ರಾರ್ಥನೆ :
ಪಂಡಿತರು, ನೀರಸರು, ಹೊಳ್ಳುಹೃದಯದ ಮುಂದೆ,
ತಮ್ಮ ಭೋಗಗಳೊಡನೆ ಇದು ಒಂದು ಸೇರಿರಲಿ
(ಸಂಸ್ಕೃತಿಯ ಚಿಹ್ನೆಯಲ್ಲವೆ ಹೊತ್ತಗೆಯ ಮನೆ ?)
ಎಂಬವರ್ಗೆನ್ನ ಕೃತಿ ಸಿಲುಕುವೊಡೆ, ನಾನಳಿದಂದೆ
ನನ್ನೊಡನೆ ತಾನುಂ ಬೆಂದು ಹೆಣಬೂದಿಯಾಗಿರಲಿ!

# ಗ್ರಾಮಸಿಂಹ

ಸಾಗುತಿದೆ ದೇವೇಂದ್ರನೈರಾವತಂ. ಬಳ್ಳು
ಬಯ್ವವೋಲೂಳುತಿದೆ, ಅಕೊ ಅಲ್ಲಿ, ನಾರುವ
ಚರಂಡಿಯಲಿ ನಿಂತು. 'ತನ್ನಾ ಬಳಿಗೆ ಸಾರುವ
ಪರಾಕ್ರಮಂ ಗಜವರೇಣ್ಯಂಗೆಲ್ಲಿ? ತೆಗೆ, ಸುಳ್ಳು!'
ಎಂಬುದಾ ಸ್ವಾನಕ್ಕೆ ಪಿತ್ತಗರ್ವಂ. ಆನೆ
ಎಳ್ಳನಿತ್ತಾದೊಡಂ ಲೆಕ್ಕಿಸದೆ ತನ್ನೊಂದು
ಗುರಿಗೆ ಗಮಿಸಿರೆ, 'ಹೇಡಿ ಹಿಂಜರಿಯುತಿದೆ' ಎಂದು
ಕುನ್ನಿ 'ಕೇಸರಿ'ಬಿರುದ ಕೊಳ್ವುದು ತನಗೆ ತಾನೆ!
ಗತಿಯ ಛಂದಕೆ ಘೋಷಿಸಿರೆ ಕಂಠದಲಿ ಘಂಟೆ,
ನಂದನದ ಗಂಧಮಾರ್ಗದಿ, ವಿಾಯೆ ಗಂಗೆಯೊಳ್,
ಚಲಿಸುವಾ ಅಚಲತೆಯ ಗರುವಗಮನಕ್ಕೆ, ಪೇಳ್,
ಗಲ್ಲಿಯ ವಿಮರ್ಶೆಯೂಳ್ ಕಿವಿಗೆ ಬೀಳುವುದುಂಟೆ?
ಆದರಾ ಗ್ರಾಮಸಿಂಹಗೆ ದಿಟವನೊರೆವನಾವನ್?
ಓ ತಿಪ್ಪೆಗಪ್ಪುಗೆಯೆ, ನೀನಾದರೂ ನಾರ್ ಅದನ್!

# ಎಚ್ಚರಿಕೆ!

೮

ಬೇಕಿಹುದನಾಡಬೇಕೆಂಬಾಸೆಯಿಹುದೆನಗೆ.
ಬಯಕೆ ನುಡಿಗಳನರಸಿ ದುಡಿದುದನಿತೂ ವ್ಯರ್ಥ:
ನೆಯ್ದ ನುಡಿಗೂ ಅನುಭವಕೆ ಹೊಂದದನ್ಯಾರ್ಥ.
ನುಡಿಸಿರಿಯ ಕಬ್ಬಿಗನ ಹಾಡು ಮೌನವೆ ಕೊನೆಗೆ!
ವಾಕ್‌ಚಪಲೆ ಸಂಚಾರಿ; ಮೌನವೆ ಚಿರಸ್ಥಾಯಿ.
ರುಚಿಗಂತೆ ಸಾಹಿತ್ಯ! ಕಲೆಗಾಗಿ ಕಲೆಯಂತೆ!
ಬೆಳಕಿಗಲ್ಲದ ಎಣ್ಣೆ ಬತ್ತಿಗಳ ಕೃಷಿಯಂತೆ!
ದಿಟಬಯಕೆ ಬಾಯಿಲ್ಲದಿದೆ; ಹುಸಿಗೊ ಹೆಬ್ಬಾಯಿ!
ಮೊದಮೊದಲು ಹೃದಯಸುಖ ತೊದಲಾಗಿ ಹೊರಹೊಮ್ಮೆ
ಸಾಹಿತ್ಯ ಕಲೆಯೆಂದು, ಬರೆದೆನ್ನ ಕವಿಯೆಂದು,
ಮೆಚ್ಚಿದರು ಹೊಗಳಿ. ತರುವಾಯ ಹೆಸರಿನ ಹೆಮ್ಮೆ
'ಕಲೆಗಾಗಿ ಕಲೆ' ಎಂದುದದರ ನೈಜವ ಕೊಂದು.
ಕಲೆ ಕನ್ನಡಿಯ ನೆಳಲು; ಅನುಭವವೆ ಮೂಲ ಮುಖ.
ನೆಳಲ ಸಿಂಗಾರದಿಂದೇಂ ಲಾಭವೇನು ಸುಖ?

# ಮಲೆನಾಡಿಗೆ

ಇತರರೆನ್ನನು ಹೊಗಳುವರು ಎಂದು ನೀನೇಕೆ
ಹೊಗಳುತಿಹೆ? ಇತರರೇನನು ಕೊಡರು. ಅದಕಾಗಿ
ಹೊಗಳಿಕೆಯ(ನುಡಿಯ ಕೊಡುಗೆಯ) ಕೊಡುತ್ತಿಹರು. ಕೂಗಿ
ಮಾತೆ ಹೊಗಳುವುದಿಲ್ಲ; ಮುದ್ದಿಸೊಲಿಯುವಳಾಕೆ
ಕಂದನನು. ತುಟಿಯ ಬರಿ ಬಯಲು ಹೊಗಳಿಕೆ ಸಾಕೆ
ನಿನ್ನ ಕವಿಶಿಶುಗೆ? ಜನರೀವ ಕೀರ್ತಿಯು, ತೂಗಿ
ನೋಡಿದರೆ, ನಿನ್ನೊಲ್ಮೆಯಿದಿರಿನಲಿ ಜಳ್ಳಾಗಿ
ತೂರುವುದು. ಒಲ್ಮೆಯಿರೆ ಹೆಸರ ಹೆಮ್ಮೆಯು ಬೇಕೆ?
ತಾಯಿಯಾಗಿರು, ಸಾಕು; ನಾನು ಹಸುಳೆಯು ನಿನಗೆ.
ಜನರ ಹೊಗಳಿಕೆಯಿಂದ ತಲೆ ತುಂಬುವುದು ಹೆಮ್ಮೆ.
ನಿನ್ನೊಲ್ಮೆಯಾದರೋ ನನ್ನ ಹೃದಯವ ತುಂಬಿ
ಸಂತೈಸಿ ಸಲಹುವುದು. ಜನರ ಮಾತನು ನಂಬಿ,
ಪ್ರೀತಿಸದೆ ಕೊಡುವವರ ಕೀರ್ತಿಯ ಸವಿಯಲಮ್ಮೆ.
ಹೆಸರಿಗಿಂತಲು ಹಿರಿದು ತಾಯಿಯೊಲ್ಮೆಯು ನನಗೆ.

# ಕೀರ್ತಿಶನಿ

ಪೀಡಿಸುತ್ತಿಹೆ ಏಕೆ? ತೊಲಗಾಚೆ, ಕೀರ್ತಿಶನಿ;
ಸಾಕೆನಗೆ ನಿನ್ನ ಸಹವಾಸ ವಿಭವಭ್ರಾಂತಿ!
ಬಾ ಬಳಿಗೆ, ಸಾಮಾನ್ಯತಾ ದೇವಿ, ಓ ಶಾಂತಿ;
ನನ್ನೆದೆಯ ತಂತಿಯಿಂ ಮೀಂಟುತಿದೆ ನಿನ್ನ ದನಿ
ಬ್ರಹ್ಮನಾಡಿಯ ಗುಹ್ಯಗಾನಮಂ. ಋಷಿಮಾನ್ಯೆ,
ಗುರುಕೃಪಾ ಮಹಿಮೆಯಿಂ ರಸದರ್ಶಿ ನಾನಾಗಿ,
ಜಸದ ಕಸುಗಾಯಿ ಹೆಸರೆಳಸದಿಹ ಹಣ್ಣಾಗಿ
ನೋಂತಿರುವುದಸ್ತುತಿಗೆ. ತೃಪ್ತಿಯ ಕಮಲ ಕನ್ಯೆ,
ಕೀರ್ತಿಯ ಮದಿರೆಯಿಲ್ಲದೆಯೆ ಕರ್ಮಗೆಯ್ಯಲ್ಕೆ
ಚೈತನ್ಯವಿರದವರಿಗಿರಲಾ ದರಿದ್ರತಾ
ಪಾನ ಭೋಗಂ. ಪೊನ್ಗೆ ಮಣ್ಗೆ ಪೆಣ್ಗಂ ಮಿಗಿಲ್
ಕೀರ್ತಿ ಸಪ್ತಮ ವೈರಿ: ಏಕೆನೆ, ತಿರಿವೊಗಳ್ಕೆ
ಮಾಲೆಯಿಕ್ಕಿದೆ ತನ್ನ ಮೆಚ್ಚನ್: ಆ ಕ್ಷುದ್ರತಾ
ಭೂತಕ್ಕೆ ನಿತ್ಯಬಲಿ: ಆಳ್, ಬಾಳ್, ನೆಲಂ, ನೀರ್, ಮುಗಿಲ್.

# ಕವಿಯ ತೃಪ್ತಿ

ಬಳಿಯಿರುವ ವೆಂಕಯ್ಯ ಕಂಠಯ್ಯ ಕಸ್ತೂರಿ
ಶ್ರೀನಿವಾಸರು ಮೆಚ್ಚಿದರೆ ಸಾಕೆನಗೆ ತೃಪ್ತಿ :
ನನ್ನ ಕನ್ನಡ ಕವನಗಳ ಯಶಸ್ಸಿನ ವ್ಯಾಪ್ತಿ
ಲಂಡನ್ನಿನೊಳಗೂದಬೇಕಿಲ್ಲ ತುತ್ತೂರಿ!
ನಮ್ಮ ಸೊಡರಿಗೆ ಮನೆಯ ಬೆಳಗುವುದೆ ಮೊದಲ ಗುರಿ ;
ದೂರದ ನೆಲವ ಬೆಳಗಲಿಲ್ಲೆಂದು ಕೊರಗುವರೆ ?
ಬೇಡವೆನ್ನುವುದಿಲ್ಲ, ಸಂತೋಷ, ಬೆಳಗಿದರೆ !
ಆದರದಕಾಗಿ ಮರುಗುವ ಮಂದಿ ಮಂಕೆ ಸರಿ!
ಹಿರಿಯ ಕವಿ ಯಾವನೂ ಹೊನಲುಲು ಹವಾಯ್ಗಳಲಿ
ಕೇಳಿಸುವುದೆಂದೆಣಿಸಿ ತನ್ನ ಕಾವ್ಯದ ವೀಣೆ
ಮಿಡಿಯನ್ಯೆ, ಬಹುದೂರದಲ್ಲಿ ಮೈಸೂರಿನಲಿ
ಕುಳಿತು. ತಂತಿಲಿಯಂಚೆ ನೆರವಾಗಿ ಈ ವಾಣಿ
ಅಲ್ಲಿಯೂ ಕೇಳ್ವುದೆಂದರಿಯೆ ಸೊಗಸುವನಿಲ್ಲಿ :
ಆದರಳನೆಂದಿಗೂ ಕೇಳ್ದುದಿಲ್ಲೆಂದಲ್ಲಿ !

# ಏಳುಸೀಳು

## (೧)

ನಾಗರಿಕತೆಯನೆಲ್ಲ ತಳ್ಳಿ, ಹೊರೆಹೊಣೆಗಳಂ
ನೂಂಕಿ, ನಿರ್ಭಾರ ನಗ್ನಾತ್ಮರಾಗಿಯೆ ತೇಲಿ
ಬನ್ನಿ ಈ ಎಡೆಗೆ, ಹಕ್ಕಿಯ ಪುಕ್ಕವನು ಹೋಲಿ
ನೀರವ ನಿರುದ್ದೇಶದಿಂದೆ. ನಿಮ್ಮೆಣೆಗಳಂ
ಹೃದಯಮುಳ್ಳರ್ಗಳಂ ಕರೆತನ್ನಿ. ರಸವೃಷ್ಟಿ
ಹೊರತು ಮತ್ತಾವುದೂ ಬೇಡವಿಲ್ಲಿಗೆ ಏದ್ಯೆ :—
ಸುಖವೆ ಸಲಿಲದ ರೂಪದಲಿ ಹರಿವ ಹೊಳೆಮಧ್ಯೆ
ಮುಮ್ಮಿಕ್ಕಿ ನೀರಾಡಿದರೆ, ಮರ್ತ್ಯರ್ಗದೀ ಸೃಷ್ಟಿ
ನಾಕನಂದನವಾಗಿ, ದೇವತೆಗಳಾಗುವಿರಿ.
ವಿಸ್ಮೃತಿಯ ವೈತರಣಿ ತೀರ್ಥರಸದಲಿ ಕೊಚ್ಚಿ
ಹೋಹವೈ ಕೊರಗು ಕೊಂಕುಗಳೆಲ್ಲ. ಸಗ್ಗಸಿರಿ
ನಾಚ್ಚಿದಪುದೇಳುಸೀಳಿಗೆ ಕರುಬಿ. ತಿರೆ ಮೆಚ್ಚಿ
ಕಬ್ಬವುಟ್ಟಿಯ ಹಿಂಡುತಿಹುದಾಲಿಸಾ : ಜೇನು
ತುಂಬಿದಂಬುಧಿ ಬದುಕು; ದೋಣಿನಾಲಗೆ ನಾನು !

# ಏಳುಸೀಳು

## (೨)

ಈ ಹೊಳೆಯೊ, ಈ ಕಾನೊ, ಈ ಮಲೆಯೊ, ಈ ಬಾನೊ:–
ಬಂಡೆದೋಳಪ್ಪುಗೆಗೆ ನೊರೆದು ನೊರೆಮುತ್ತಿರಚಿ
ಕುಣಿದು ಬನಗಳನಲೆವ ಈ ಹೊಳೆಯೊ! ರವಿಯ ರುಚಿ
ರಂಜಿಸಿಹ ಚೈತ್ರಪಕ್ಷಿಗಳುಲಿಯ ಈ ಕಾನೊ!
ಮುದ್ದೆಮುದ್ದೆಯೆ ನಿದ್ದೆ ಕನಸುಗೊಂಡೇರಿಳಿದು
ಬಾನ್‌ಕರೆಗಲೆವ ಈ ಮಲೆಯೊ! ಸಾಂತತೆಗೆ ನೋಂತ
ಅನಂತತಾ ಪ್ರತಿಮೆಯೆನಲೀ ಗಿರಿವನ ದಿಗಂತ
ನೇಮಿನಿಷ್ಠೆಯ ಬಾನೊ! –ಕವಿ, ಮೌನಮಿರ್ ತಿಳಿದು:
ಕಾಯುತಿದೆ ಮಲೆನಾಡು ತನ್ನ ಸರ್ವಸ್ವಮಂ
ಸೂರೆಗೊಳ್ಳುವ ವರ್ಣಶಿಲ್ಪಿಯಂ :—ಕವಿಯಾಗಿ,
ರಸದರ್ಶಿಯಾಗಿ, ರೋರಿಕನಂತೆ ಋಷಿಯಾಗಿ
ಬಣ್ಣದಮೃತದ ಸೆರೆಗೆ ಕಣ್ಣೆದೆಯ ವಿಶ್ವಮಂ
ನೈವೇದ್ಯಗೈವಾತನಂ. ಮುದ್ದು ತೇಜಸ್ವಿ,
ನೀನಪ್ಪೆಯೇನಾ ವರ್ಣಶಿಲ್ಪದ ತಪಸ್ವಿ?

# ಕನ್ನಂಬಾಡಿ

## (೧) ಬೃಂದಾವನ

ಮಲೆನಾಡಿನೊಂದಿರುಳು ಮುಂಗಾರು ಮಳೆ ಹುಯ್ದು
ಬಿಟ್ಟಂದಡವಿಗೆಯ್ದಿದೆನು ಕವಿದು ವಟ್ರೈಸಿ
ಕಗ್ಗಲ್ಲಿನಂತಿದ್ದ ಕತ್ತಲ್ಗಡಲನೀಸಿ.
ವನಮಧ್ಯೆ ಹಾಸುಹೊಕ್ಕಾಗಿ ಕಿಡಿಗಳ ನೆಯ್ದು
ಕಂಗೊಳಿಸಿತದ್ಭುತಂ ಮಿಣುಕು ಹುಳುಗಳ ಸೇನೆ,
ಕತ್ತಲೆಗೆ ಕಾಂತಿ ರೋಮಾಂಚವೆನೆ ಹೊಳೆಯುತ್ತೆ,
ಮೇಣಳಿದು ಕಣ್ಗೆ ಕಾಡಿಗೆ ಮೆತ್ತಿತೆನೆ ಮತ್ತೆ :
ಒರ್ಮೆ ತಿಮಿರಂ, ಜ್ಯೋತಿಯೊರ್ಮೆ, ಮಿಣುಕಿದೆ ನಾನೆ!
ನಿನ್ನೆಲ್ಲ ಸಿರಿಯುಮಾ ಮಿಂಚು ಹುಳುವೊಂದಕ್ಕೆ
ದೊರೆಯಲ್ಲ. ವೈಯಾರಿಯಂತೆ, ಕನ್ನಂಬಾಡಿ,
ಚೆಲುವೆ ನೀನಪ್ಪೊಡೇನ್? ಇದು ಪಾಣ್ಬೆಯರ ಗಾಡಿ.
ಗರತಿ ಗೌರವವಿಲ್ಲದಿದು ರುಚಿ ಲಘುತ್ವಕ್ಕೆ.
ಕಲೆಯ ಪಾಂಗಿನಿತಿಲ್ಲವಿಲ್ಲಿ : ತಿರುಗತ್ತಕಡೆ;
ನೋಡುವಂ ನೀರು ನಿಂತಾ ಗಭೀರವನು ; ನಡೆ!

# ಕನ್ನಂಬಾಡಿ

## (೨) ನೀರಾಕರ

ಪ್ರತಿನಿಧಿ ಮಹಾಪುರುಷನೆಂತು ದೇವರಿಗಂತು
  ನಮಗಿದು ಪಯೋನಿಧಿಗೆ ಪ್ರತಿಮೆ, ವಿಸ್ತಾರದಲಿ,
  ಸಂಭ್ರಮ ತರಂಗ ತಾಂಡವದ ಗಂಭೀರದಲಿ,
ಫೇನ ರಚನಾಸ್ಫಾಲನಾ ಶೈಲಿಯಲಿ ! ನಿಂತು
ನೋಡಯ್ಯ, ಬೃಂದೆಯಾ ಶಿಶುರುಚಿ ಕಲೆಯ ಮರೆತು,
  ಮೇಣಿದರ ಋಷಿಕಲಾ ಭವ್ಯತೆಯನೆದೆಮುಟ್ಟಿ
  ಸವಿದು ಸಾಕ್ಷಾತ್ಕರಿಸಿ : ಹೋಹನ್ನೆಗಂ ದಿಟ್ಟಿ
ನಿನ್ನಾತ್ಮವನು ತೇಲಿಬಿಡು ನೀರಿನಲಿ ಬೆರೆತು !
ಭ್ರಮಿಸುತಿರೆ ಮಾಯಾ ಜಗತ್ತಿನಲಿ ದೇವನಂ
ಮರೆವಂತೆ, ತಿರುಗುತಿರಲಲ್ಲಿ ಬೃಂದಾವನಂ
  ಮರೆಯಿಸಿತು ನಿನ್ನನೆಲೆ ಕೃಷ್ಣನೀರಾಕರವೆ,
  ಕಿರಿದೊಂದಿನಿತು ಪೊಳ್ತು : ನಿನ್ನುತೆಗಿಳಿಯೆ ಮರೆವೆ ;
ಏರಲುನ್ನತಿಗರಿವೆ ! ಬೃಂದೆಗಿಳಿದಂದಾನು
ಮರೆಯದೊಲೆ ನಿನ್ನಿರವನೆದೆಗುಲಿಯುತಿರು ನೀನು !

# ಕನ್ನಂಬಾಡಿ

## (೩) ನೀರ್ಬಾಗಿಲೆಡೆ

ನೋಡಿದಷ್ಟೂ ಸಾಲದಿದೆ. ನೋಡೆ, ತನ್ನಂತೆ
ನನ್ನನೂ ಮುತ್ತುಮುತ್ತಾಗಿ, ನೊರೆನೊರೆಯಾಗಿ,
ತೂಗಿ, ಬಂಡೆಗೆ ಬೀಸಿ, ಬಡಿದಪ್ಪಳಿಸಿ, ಕೂಗಿ,
ಭೋರ್ಗರೆದು, ದುಮುಕಿ, ಮುಂದಕೆ ನುಗ್ಗುತಿದೆ (ಚಿಂತೆ
ತತ್ತರಿಸುವಂತೆ) ಕಾವೇರಿ, ಭೀಕರ ಕಾಳಿ
ತಾನಾಗಿ! ಮೇಲಲ್ಲಿ ಸೇರಿದ ತಪಶ್ಶಕ್ತಿ
ಕರ್ಮಮಯವಾಗಿರುವುದಿಲ್ಲಿ. ತಪದಿಂ ವ್ಯಕ್ತಿ
ಗಳಿಸಿ ಸತ್ವವನಿಳಿಯೆ ಕಾರ್ಯಕೆ, ರಜಶ್ಶಾಲಿ
ತಾನಾಗಿ, ತಡೆವರಾರಾತನಂ? ಕಗ್ಗಲ್ಲು
ಕೂಡ ಕೆಲಸಾರುವುದು ಸೆಡೆತು ದಾರಿಯನಿತ್ತು;
ಮುರಿವುದಾತನ ವೇಗಕೆಡರುವಾಯಿಯ ಹಲ್ಲು,
ಬಿಸಿಗೈಕಿಲಂತೆ. ಮುಟ್ಟಿದರೆ ಜಡವೂ ಮುತ್ತು
ಮುತ್ತಾಗಿ ರಾರಾಜಿಪುದು. ಮೇಣವನ ಸೊಲ್ಲು
ನಿತ್ಯವಹುದದಕಿಲ್ಲದೆಯೆ ಮುದಿತನಂ ಮಿತ್ತು!

# ಕನ್ನಂಬಾಡಿ

## (೪) ಕಟ್ಟೆ

ಭವ್ಯವೈಸಲೆ ಮಾನವನ ಮನಂ ಮೇಣ್ ಬಲಂ,
ಸ್ವಚ್ಛಂದ ವಾಹಿನಿಯನುರದೆ ಬಂಧಿಸಿ ಕಟ್ಟಿ
ಬಾಯ್ಕೇಳುವಂತೆಸಗಿ ! " ತೆಂಗುಗಿಂಗನು ಕುಟ್ಟಿ,
ಪೂಜೆಗೀಜೆಯ ಮಾಡಿ, ಬೇಡೆ, ಬಂಜರು ನೆಲಂ
ಫಲವತ್ತಹುದೆ ? ಸೃಷ್ಟಿ ನಿಯಮದೊಳಗುಟ್ಟೆನರಿ,
ನಖಮುಖಾರಕ್ತಮಯಿಾ ಪ್ರಕೃತಿಮಾರಿಯ ಜುಟ್ಟು
ಹಿಡಿದಡಸಿ ನಿನ್ನೆದೆಯ ಬಯಕೆಯ ನೊಗಕೆ ಕಟ್ಟು !"
ಎಂಬ ಮಾನವ ಮತಿಗೆ ಎತ್ತಣರಿ ? ಯಾರು ಸರಿ
ಕೋಟಿ ದೇವರ್ಕಳಲಿ ? ಬುದ್ಧಿಯ ತಪೋವಹ್ನಿ
ಮೈವೆತ್ತವೋಲಿರುವ ಮನುಜಸಾಹಸದೇವಿ,
ಧನ್ಯೆ, ಓ ವಿಜ್ಞಾನವಿದ್ಯೆ !—ನಿನ್ನೀ ಕಾಣ್ಕೆ,
ಯಂತ್ರರ್ಷಿ, ಕನ್ನಡ ಸಿರಿಯ ಶ್ರೀಯುಸಿಯ ಪೂಣ್ಕೆ !-
ಬರಗಾಲದೆದೆಗೆ ಗುರಿಯಿಟ್ಟು ಕಟ್ಟೆಯ ಕೋವಿ
ಕಟ್ಟಿದಂತಿದೆ ! ಪೆರ್ಮೆಯಿಂ ನೋಳ್ಪವೈತನ್ನಿ !

# ಕನ್ನಂಬಾಡಿ
## ೩

## (ಆ) ಪ್ರೇಕ್ಷಕನೊಬ್ಬನಿಗೆ

ನೀನು, ಒಬ್ಬನೆ ನಿಂತು ನಭದಿ ತಾರೆಯ ರಾಶಿ
ರಂಜಿಸುವ ರಜನಿಯಲಿ ಮೈಮರೆಯದಿಹ ನೀನು,
ಹೊತ್ತಾರೆ ಹಸುರು ಹಸಲೆಯಲಿ ಹಿಮಮಣಿ ತಾನು
ಮಿರುಗುತಿರೆ ಕಂಡು ಮಿರುಗದ ನೀನು, ಮಳೆಸೂಸಿ
ಮುಂಗಾರು ಬಿರುಗಾಳಿ ಸಿಡಿಲು ಮಿಂಚನು ಬೀಸಿ
ನುಗ್ಗಿಬರೆ ನಿರ್ಲಕ್ಷಿಸಿದ ಜಡನೆಲವೊ ನೀನು,
ಸೌಂದರ್ಯದಾರಾಧನೆಗೆ ಬಂದಿರುವೆಯೇನು ?
ಅಂತರಿತರದು ಆತ್ಮವಂಚನೆ, ರಸಿಕವೇಷಿ ?
ಕಲೆಯೊಲ್ಮೆಗಲ್ಲ, ಪೇಟೆಯ ಬೇಸರನು ಕಳೆಯೆ
ಬಂದಿರುವೆಯಿಲ್ಲಿಗಿಂದ್ರಿಯ ರುಚಿಗೆ : ನಾ ಬಲ್ಲೆ,
ನೀನೊಬ್ಬನೆಯೆ ಇಲ್ಲಿ ಬಹುಕಾಲವಿರಲಾರೆ,
ನಿನ್ನಂಥ ಇತರರಿಲ್ಲಿಗೆ ಬಾರದಿರೆ!—ಕಲೆಯೆ ?
ಕುಣಿವ ಬಣ್ಣದ ಮೋಹರಮಿದು ! ನಿನ್ನ ಎದೆಗೆಲ್ಲೆ
ಕಣ್ಣು : ನಿನ್ನಾಸೆ ಕಲೆಯಲ್ಲವೊ, ಕಲೆಯ ಜಾರೆ !

# ಕನ್ನಂಬಾಡಿ

## (೬) ದಾರಿಯ ಹಳ್ಳಿ

ಇದು ಇರಲಿ! ಅದನು ನೆನೆ: ದಾರಿಯಲಿ ಮುಂದೆಕುರಿ
 ಒಂದರಡಿಯೊಂದು ತಲೆ ತೂರಿ ನಿಲುವಂತಲ್ಲಿ
 ಮುರುಕುಮನೆ ಹಿಂಡು ಕಿಕ್ಕಿರಿದಿದ್ದ ಬಡಹಳ್ಳಿ,
ಅದನು ನೆನೆ! ಮೈಯೆಲ್ಲ ಕಜ್ಜಿಯಿರೆ ಮೊಗದ ಸಿರಿ
ಸೊಗಸುವುದೆ? ಸಿಂಗರಿಸೆ ಬಣ್ಣದ ಹುಡಿಯನೆರಚಿ
 ಕೆನ್ನೆಗೆ, ತುಟಿಗೆ ಕೆಂಪುರಂಗನು ಬಳಿದುಹಚ್ಚಿ,
 ಮುಡಿಗೆ ಹೂ ಮುಡಿಸಿ, ಸುಕ್ಕಿನ ತೆರೆಗಳನು ಮುಚ್ಚಿ,
ಬಂದೀತೆ ನೈಜ ಸೌಂದರ್ಯದ ಸಹಜ ಸುರುಚಿ?
ಸರಸ ಸಲ್ಲಾಪದಿಂ ಬೃಂದಾವನವನಲೆವ
 ಓ ಧನಿಯೆ, ನಿನ್ನ ಮನದಿಂ ಮರೆಯಬಿಡೆನಯ್ಯ
 ಆ ಮುರುಕು ಬಡಹಳ್ಳಿಯಂ. ಅದರ ಪೊಲೆ ಕೀವು
ನಿನ್ನ ಸಂತೋಷದೊಡಲಿನಲಿ! ನೀನಿದೊ ಕಳೆವ
 ಹೊತ್ತಿನಲಿ ಹಸಿಹಸಿಯುಮಾ ಬಡವರೊಣಮೆಯ್ಯ
 ಬಸಿವ ಪಸಿನೆತ್ತರೆನೆ, ನೀಂ ನಾಡಿನೆದೆಬಾವು!

# ಸಿಬ್ಬಲುಗುಡ್ಡೆ

ಮೇಲೆ ಬಾನುಕ್ಕುನೀಲಿಯಲಿ ತೇಲುತಿದೆ ರವಿ;
ಸುತ್ತುಂ ದಿಗಂತಲೀನಮನಂತ ವನಪಂಕ್ತಿ
ರಾಜಿಸಿದೆ, ಹೊಳೆಗೆ ಹಸುರಂಚಾಗಿ. ಸುಖ ಶಾಂತಿ
ಜೊತೆಗೂಡಿ ಪರಿವಂತೆ ಸೌಂದರ್ಯಮತ್ತ ಕವಿ-
ಹೃದಯದಲಿ, ಹಬ್ಬಿದ ಮಳಲುಹಳದಿಯನ್ನಪ್ಪಿ
ಪ್ರವಹಿಸಿದೆ ತುಂಗಾ ಸಲಿಲ ನೀಲಿಮಪ್ರೀತಿ
ಪ್ರೇಮ ಸಂಗೀತಮಂ ಪಾಡಿ.... ಏಂ ನಿರ್ಭೀತಿ
ಮೀಂಗಳಿಗೆ!........ರಮ್ಯತೆಗೆ ತಿಲಕವಿಟ್ಟಂತೊಪ್ಪಿ
ಅದೊ ಹಾರಿ ಬರುತಲಿವೆ ನೀರ್ಕಾಗೆ ಬೆಳ್ಳಕ್ಕಿ,
ವನಪಟದ ಭಿತ್ತಿಯಲಿ ನೂರು ಕರಿಬಿಳಿ ಚುಕ್ಕಿ,
ಪ್ರಾಣವೇ ವರ್ಣಚಿತ್ರಂ ಬರೆಯುತಿರುವಂತೆ
ಪ್ರಾಣಮಯವಾಗಿ! ದರ್ಶನಕೆ ಕಬ್ಬಿಗನ ಮೈ
ಹೊಳೆಯಂತೆ, ನೀರಂತೆ, ಬಾನಂತೆ, ಬನದಂತೆ
ಪುಲಕಿತಂ, ಪರವಶಂ, ಪಸುಳೆವೋಲ್ ತಕ್ಕತ್ತೈ!

# ನವಿಲುಕಲ್ಲಿನಲಿ ಉಷಃಕಾಲ

ದತ್ತೂರಿಯ ಹೂವು, ತಾವರೆ, ಕಿತ್ತಿಳೆಯ ಹಣ್ಣು,
ಕೇಸರಿ, ಗುಲಾಬಿ, ಕುಂಕುಮರಂಗು—ತರತರದ
ಫಲಕುಸುಮ ಸಮ ರತ್ನರಾಗ ಸುಮನೋಹರದ
ಭೋಗಮಂದಾಕಿನಿಯ ಪ್ರವಹಿಸುತೆ ಉಷೆವೆಣ್ಣು
ಮೂಡುತಿಹಳದೊ ದೂರ ದಂತುರ ದಿಗಂಗದಲಿ,
ಪ್ರತಿಭಾತಟಿತ್ತಿನಿಂ ಮನವನುಜ್ವಲಗೈದು,
ಸೌಂದರ್ಯ ನಂದನವನಾತ್ಮ ನಾಕಕೆ ನೆಯ್ದು,
ಗಿರಿವನ ತರಂಗಮಯ ಸಹ್ಯಾದ್ರಿರಂಗದಲಿ!
ಹಬ್ಬಿಹುದರಳಿಮಂಜು ನೊರೆಯ ಹೆಗ್ಗಡಲಾಗಿ
ಬಿತ್ತರದ ಬಿಂಕದಿಂ ಕಂದರಂಗಳ ತುಂಬಿ,
ಸೃಷ್ಟಿಸುತೆ ಸಾಗರದ್ವೀಪ ಸಂಮ್ಮೋಹಮಂ.
ಭಾವಭಾಗೀರಥಿಯು ಧುಮುಕಿದೆ ನಭಸ್ತುಂಬಿ
ಪ್ರಾಣಶೈಲಾಗ್ರದಿಂ ಪ್ರಾಸ ಘೋಷಿಣಿಯಾಗಿ
ಕೊಚ್ಚಿ ಕರಗಿಸಿ ದೇಹ ನಾನೆಂಬ ಗೇಹಮಂ!

# ರಾಜಧಾನಿ

ಹರಿಯುತಿಹುದಿರುಳ್ನಿದ್ದೆ ತಿರೆಯ ಮನದಿಂ, ತೇಲಿ
ಗಾಳಿಗುದುರುವ ಹಕ್ಕಿಗರಿಯಂತೆ. ಉಷೆವೆಣ್ಣು
ಮೂಡಣ ದಿಗಂತದೆವೆಯಂ ಬಿದಿರ್ಚುತೆ ಕಣ್ಣು
ತೆರೆದಿಹಳು. ಮುಸುಗಿಹುದು ಮೃದುಮನೋಹರನೀಲಿ
ಚಾಮುಂಡಿಯಂ : ಮಲಗಿದಂತಿದೆ ಮಹಾಕಾಲಿ
ವಿಶ್ರಾಂತಿಯಲಿ! ದಿನದಿನದ ಪರಿಚಯದ ಮಣ್ಣು
ಸ್ವರ್ಗೀಯವಾಗಿಹುದು. ಮುಗಿಲ ಕಿತ್ತಿಳೆಹಣ್ಣು
ಮಾಗುತಿಹುದೊಯ್ಯೊಯ್ಯನುರಿಯ ಬಣ್ಣವ ಹೋಲಿ.
ರಾಜಧಾನಿಯ ಬಹು ಮುಖದ ಬೃಹಜ್ಜೀವನಂ
ಮೆಲ್ಲ ಮೆಲ್ಲನೆಯೆ ಮೈಮುರಿಯುತಿದೆ, ಪವಮಾನ
ಕ್ಷುಬ್ಧವಾಗುವ ಸ್ತಬ್ಧ ಜಲಧಿ ಜೀವನದಂತೆ.
ಜಾಗರಿತವಾಗುತಿದೆ ನಗರದ ಮಹಾಮನಂ
ಹಗೆ ಒಲ್ಮೆ ಸಿರಿ ಬಿಜ್ಜೆ ಮಾನ ಮೇಣಪಮಾನ
ತಂತ್ರದಲಿ, ಜಟಿಲಜಾಲಂ ನೆಯ್ವ ಜೇಡನಂತೆ!

**ಒಂಟಿಕೊಪ್ಪಲಿನ ಜಲಾಶಯದಿಂದ ಫಾಲ್ಗುಣದ ಉಷಃ ಕಾಲದಲ್ಲಿ**

# ಮೋಡಗಳು

ಪ್ರಕೃತಿ ಕಲೆಗಿಂ ಮಿಗಿಲೆ ನರಕೃತಿಯ ಕಲೆ? ನೋಡ,
ಆಶ್ವೀಜದಾಕಾಶದಮೃತ ಚಿತ್ರದ ಶಾಲೆ
ಸೃಷ್ಟಿಶಿಲ್ಪಿಯ ಹೃದಯ ಪಿಂಡಕುಂಡ ಜ್ವಾಲೆ
ಕಡೆದಿಟ್ಟ ಕೃತಿಗಳಿಂ ಭೀಮರಮ್ಯಂ! ಮೋಡ
ಅರಳೆರಾಸಿಗಳಂತೆ, ಬೆಣ್ಣೆಬಂಡೆಗಳಂತೆ,
ಫೇನ ಮೃದು ರಜತಗಿರಿ ಶಿಖರ ಪದ್ಮಗಳಂತೆ,
ಕಡೆದ ಹಾಲ್ಗಡಲೆದ್ದು ಸಾಲ್ಗೊಂಡಲೆಗಳಂತೆ
ಶೋಭಿಸಿವೆ, ಶರದಭ್ರ ಶುಭ್ರಚಿಂತೆಗಳಂತೆ!
ಆವ ಕವಿಗಾವ ಶಿಲ್ಪಿಯ ಕೌಶಲಕೆ ಸಾಧ್ಯ
ಈ ಬೃಹತ್, ಈ ಮಹತ್, ಈ ರೂಪವೈವಿಧ್ಯ?
ಬರಿಯ ಮೋಡಗಳಲ್ಲ ಇವು ಬಿಳಿಯ ಆತ್ಮಗಳ್,
ಕ್ರಿಸ್ತ ಬುದ್ಧರ ಪೋಲ್ವ ವಿಶ್ವದ ಮಹಾತ್ಮಗಳ್:
ಹಿಂದೆ ಬಂದುವೊ ಮುಂದೆ ಬರಲಿಹವೊ ಪ್ರಾಣಗಳ್,
ಧ್ಯಾನಗಳ್, ಭಾವಗಳ್, ಲೋಕ ಕಲ್ಯಾಣಗಳ್!

# ಪೂರ್ಣಯೋಗಿಯೆ ಪರಮಭೋಗಿ

ಬೇಸರದ ಬಂದಿಳಿಕೆ ಮನದ ಮಾವಿನ ಮರಕೆ
ಹಿಡಿದದನು ತಿರುಗಿಸುವ ಮೊದಲೆ ಬೇವಿನತನಕೆ
ನಿನ್ನ ಜೀವವನು ದುಮುಕಿಸು ಜಗದ ಜೀವನಕೆ:
ತೊರೆಯಲ್ಲಿ ತೆರೆಯಾಗಿ ಹರಿಯಲದು ಸಾಗರಕೆ.
ಪಾಲ್ಗೊಂಡು ಬೇರೆ ನಿಲ್ಲುವ ನೀರ್ಗೆ ಪರಮಗತಿ
ಪಾಚಿ; ಹೊಳೆಗಿಳಿಯಲ್ಕೆ ತಾನೆ ಸಂಜೀವಸುಧೆ:
ಕೋಟಿ ವೀಚಿಗಳೊಡನೆ ಕುಣಿಯುವಾನಂದವಿದೆ;
ತನ್ನಲ್ಪ ಗಾನಕ್ಕೆ ಕಲ್ಲೋಲ ಸರ್ವರುತಿ
ಶ್ರುತಿಯಾಗುವೊಂದತುಲ ಸಂಘಕೃಪೆ.—ಜಡತನಂ
ಸ್ವಾರ್ಥದ ತಮೋನಿದ್ರೆ: ತಳ್ಳಿ ತೊರೆದೆದ್ದೇಳು.
ಜೀವೋತ್ಸವದ ತೇರ್ಗೆ ಗಾಲಿಯಾದೊಡೆ ಬಾಳು
ಸಾರ್ಥಕಂ, ಸುಂದರಂ, ಮಧುರ ಚಿರನೂತನಂ.
ನೀರಸತೆಗಿಂ ಪಾಪಮಿಲ್ಲ, ರಸಕೆಣೆಯಾಗಿ
ಪುಣ್ಯಮಿಲ್ಲೆನೆ—ಪೂರ್ಣಯೋಗಿಯೆ ಪರಮಭೋಗಿ!

# ಊರ್ಮಿಳಾ ದೇವಿ

ರಾಮಾಯಣದ ಮಹಾ ರತ್ನವೇದಿಯ ಮೇಲೆ,
ಮೂಲೆಯಲಿ, ನಿಂತಿರುವುದೊಂದಮೃತ ಶಿಲ್ಪಕೃತಿ,
ನಾಣ್ಚಿ, ಕಾಣದೆ ಸಂತೆಗಣ್ಗಳಿಗೆ: ಪೂರ್ಣಸತಿ,
ಊರ್ಮಿಳಾದೇವಿ, ಲಕ್ಷ್ಮಣ ಚಿರ ತಪಶ್ಶೀಲೆ!
ತ್ರೈಭುವನ ವಂದಿತ ಬೃಹನ್ಮೂರ್ತಿಗಳ ಛಾಯೆ
ಮುಚ್ಚಿ ಮರೆಸಿದೆ ನಿನ್ನನೆಲೆ ಸಾಧ್ವಿ : ಅದರಿಂದೆ
ಈ ಮಂದಿ ಹೂವು ಹಣ್ಗಳ ಪೂಜೆಯನು ಮುಂದೆ
ಕಣ್ಸೆಳೆವ ಜಸಕೀಯುತಿದೆ. ಕೀರ್ತಿಯಾ ಮಾಯೆ,
ಪೊನ್ನಪೊಳಪೊಲ್, ಸುಲಭವೇದ್ಯ; ಮಹಿಮಾ ಜ್ಯೋತಿ,
ಸಂಯಮದ ಸಂಪತ್ತಿನೊಲ್, ಸಂಸ್ಕೃತಿಗೆ ಮಾತ್ರ
ಗೋಚರಂ.—ಹನುಮಂತ ರಾಮ ಲಕ್ಷ್ಮಣ ಸೀತೆ
ಕೈಕೊಳಲಿ ಜನಪೂಜೆಯಂ; ನಿನಗೆ ಸಂಪ್ರೀತಿ
ನನ್ನದಿದೆಕೋ, ಜನನಿ : ನನ್ನ ಜೀವನ ನೇತ್ರ
ನಿನ್ನ ಬಾಳಂತಿರ್ಕೆ, ಹೇ ಗೋಚರಾತೀತೆ!

# ಹೋಮರ್

ಹೋಮರ್, ನಿನ್ನ ಕಲೆ ಪಿರಿದಾದೊಡಂ ನಿನ್ನ
ಕಥೆ ಪಿರಿದಲ್ತು. ಲೋಕಸುಂದರಿ ನಿನ್ನ ಹೆಲೆನ್
ಚೆಲುವೆ ದಲ್ ; ಮತ್ತೇನುಮಲ್ತು : ನಾಂ ಪೇಸುವೆನ್
ನಾಡು ಮನೆ ಅಣ್ಣತಮ್ಮಂದಿರಂ ಮೇಣ್ ತನ್ನ
ಪತಿಯುಮಂ ಪೆಣ್ಗೂಸುಮಂ ತ್ಯಜಿಸಿ, ತನುರುಚಿಗೆ
ಸೋತು, ಪಾಣ್ಬಂ ಬೆರೆಸುತೋಡಿಪೋದಾ ಪೆಣ್ಗೆ !
ಈಲಿಯಡ್ಡಿನ ಮಹಾಕಲೆಯು ನೆತ್ತರ್ಗಣ್ಗೆ
ಬೆಲೆವೆಣ್ಣೆ ಗುರಿಯಾಯ್ತೆ ?—ಕ್ಷಮಿಸು : ಸೀತೆಯ ಶುಚಿಗೆ
ರಾಮಾಯಣವನೊರೆದನಾದಿಕವಿ ವಾಲ್ಮೀಕಿ.
ಆ ಶುಚಿಯ ಗಂಗೆಯೊಳ್ ಮಿಂದೆನಗೆ ಸಹಿಸದಯ್
ಕೆಸರಿನೋಕುಳಿಯು ನಿನ್ನದ್ಭುತ ರಣಕ್ರೀಡೆ !
ದಿವ್ಯಕಲೆಗಿರವೇಳ್ಕು ಭವ್ಯವಿಷಯಂ : ಪಿನಾಕಿ
ಬಿಲ್ಲೆಳೆವನೇನಲ್ಪ ಕುರಿಗಾಗಿ ? ಸಿಡಿಲೆ ಸಯ್
ಠಂಕಾರವಾದೊಡೇಂ ? ನಾಣ್ಚುವೆ, ಗುರಿಯ ನೋಡೆ !

# ವಿಶ್ವಭಿಕ್ಷು

ಸ್ವಾರ್ಥತಾ ಸೂತ್ರಂಗಳಿಂ ನೆಯ್ಯುತಿದೆ ಸೃಷ್ಟಿ
ಪರಾರ್ಥತಾ ಶುಭ್ರ ದೇವಾಂಗಮಂ. ವ್ಯಕ್ತಿ
ಪಡುವ ಗೆಯ್ಮೆಗೆ ತನತೆ ಸುಖಸಾಧನಾಸಕ್ತಿ
ಗಂತವ್ಯಮಾಗಿರಲದನ್ ಬ್ರಾಹ್ಮೀ ಸಮಷ್ಟಿ
ವಿಶ್ವಪ್ರಯೋಜನಕೆ ಪಾಸು ಪೊಕ್ಕಂಗೆಯ್ದು,
ಜೀವರಿಗೆ ಸ್ವಾತಂತ್ರ್ಯ ಸಂಭ್ರಾಂತಿಯಂ ನೀಡಿ,
ತನ್ನ ಇಚ್ಛಾ ರಥಯುಗಕ್ಕವರ್ಗಳಂ ಪೂಡಿ
ರಕ್ಷಿಸುತ್ತಿದೆ ಜಗತ್ ಕಲ್ಯಾಣಮಂ ನೆಯ್ದು.
ಹೇ ವ್ಯಕ್ತಿ, ನಿನ್ನ ತ್ಯಾಗದ ತಿರುಪೆಗಾ ಶಿವಂ
ಜೋಳಿಗೆಯನಾಂತು ಭಿಕ್ಷಾಟನೆಗೆ ಹೊರಟಿಹನೆ,
ಹೇಳ್, ಸ್ವಯಂ ತ್ಯಾಗೀಶ್ವರಂ? ತನ್ನ ಸಂತಸಕೆ
ಪ್ರಾಣಿ ಪ್ರಾಣಿಯನಪ್ಪಿಕೊಳೆ ಸಂತತಿಯ ಭವಂ
ತಾನಪ್ಪುದನಿವಾರ್ಯಮುಪಫಲಂ! ಪ್ರಕೃತಿಯನೆ
ಕೃತಿಗೆಯ್ದವಗೆ ನಿನ್ನ ಕೃತಿ ಭಿಕ್ಷೆಯೇನ್ ರಸಕೆ?

# ವರ್ಡ್ಸ್‌ವರ್ತ್

ಆಂಗ್ಲ ಕವಿಗಳಲಿ ನೀನೆನ್ನೆದೆಯ ಸೆಳೆದಂತೆ
ಉಳಿದವರು ಸೆಳೆದಿಲ್ಲ, ನರನಾಟಕವ ನೋಡಿ
ರಂಗದಲಿ ಚಿತ್ರಿಸಿದ ಷೇಕ್ಸ್‌ಪಿಯರನುಂ ಕೂಡಿ.
ನೀನೊಂದು ಪರ್ಣಶಾಲೆ; ಆತನೋ ಸಂತೆ!
ಶಾಂತಿಯಲಿ ಕೊನೆಗಾಣುವುದು ನಿನ್ನಮಲ ಚಿಂತೆ;
ಆತನದೊ ಕ್ರಾಂತಿಯಲಿ. ವನದ ಪಕ್ಷಿಯು ಹಾಡಿ,
ಪ್ರಕೃತಿ ಸಂಸರ್ಗದಲಿ ದಿವ್ಯಭಾವವು ಮೂಡಿ
ಆತ್ಮವು ವಿರಾಟದಲಿ ಎಂತು ವಿಹರಿಸುವಂತೆ
ಮಾಡುವುದೊ, ಕಾವ್ಯರ್ಷಿ, ನಿನ್ನ ವಾಣಿಯ ರೀತಿ
ಅಂತಿಹುದು. ಭಿನ್ನಾಭಿಪ್ರಾಯವನು ಜಗವೆಲ್ಲ,
ಪಂಡಿತರ ಗುಂಪೆಲ್ಲ, ಘೋಷಿಸಲಿ. ನೀನೆನಗೆ
ಸಹೃದಯನು, ಕವಿವರನು; ನನ್ನೊಲ್ಮೆ ಇದೊ ನಿನಗೆ.
ನಿನ್ನ ಋಷಿಜೀವನಕೆ—ನಿನ್ನ ನಿರ್ಮಲ ನೀತಿ,
ಜನರೊಲ್ಮೆ, ಶಾಂತಿ, ಕನಿಕರ, ದಯೆಗೆ-ಎಣೆಯಿಲ್ಲ.

# ಪಂಜೆಯವರಿಗೆ

ಹಾಲು ಸಕ್ಕರೆ ಸೇರಿ ನೀವಾದಿರಾಚಾರ್ಯ
ನಡೆಯ ಮಡಿಯಲಿ, ನುಡಿಯ ಸವಿಯಲ್ಲಿ. ನಿಮ್ಮ ಬಗೆ
ಹಸುಳೆ ನಗೆ : ನಿಮ್ಮ ಕೆಳೆಯೊಲುಮೆ ಹಗೆತನಕೆ ಹಗೆ.
ಕಪ್ಪುರಕೆ ಕಿಡಿ ಮತ್ತೆ ಸತ್ಯಕ್ಕೆ ಸೌಂದರ್ಯ
ಸಂಗಮಿಸಿದಂತೆ, ರಂಜಿಸಿದೆ ಜೀವನ ಸೂರ‍್ಯ
ನಿಮ್ಮದೆಮ್ಮಯ ನುಡಿಯ ಗುಡಿಗೆ, ಮಂಗಳ ಕಾಂತಿ
ಪರಿಮಳಂಗಳನಿತ್ತು. ನಿಮ್ಮ ಬಾಳಿನ ಶಾಂತಿ
ಮತ್ತೆ ರಸಕಾರ್ಯಗಳಿಗುಪಮೆ ವೀಣಾತೂರ್ಯ!
ಕಚ್ಚಿದರೆ ಕಬ್ಬಾಗಿ, ಹಿಂಡಿದರೆ ಜೇನಾಗಿ
ನಿಮ್ಮುತ್ತಮಿಕೆಯನೆ ಮೆರೆದಿರಯ್ಯ : ಚಪ್ಪಾಳೆ
ಮೂಗುದಾರವನಿಕ್ಕಿ ನಡೆಯಿಸಿದರದು ಬಾಳೆ
ಹಿರಿಯ ಸಿರಿ ಚೇತನಕೆ? ಕೀರ್ತಿಲೋಭಕೆ ಬಾಗಿ
ಬಾಳ್ಬಂಡಿ ನೊಗಕೆ ಹೆಗಲಿತ್ತವರು ನೀವಲ್ಲ ;
ತೀರ್ಮಣಿಯನೆಳೆದಿರಲ್ಲದೆ ಮತ್ತೆ ಮಣಿದಿಲ್ಲ !

# ಸ್ವಾಮಿಜಿಗೆ

ನಿಮಗೆ ನಾನ್ನಾವ ರೀತಿಯಿಂದೆನಿತು ಖಣಿ
ಎಂದು ಕಳೆದ ಕಾಲದ ಪುಸ್ತಕದ ಪುಟಗಳನ್
ಒಂದೊಂದನೆಯೆ ಮಗುಚಿ ನೋಡಿದರೆ ಪಟಗಳನ್,
ಥಳಿಸುವುದು ವಜ್ರ ವೈಡೂರ್ಯಮಯ ನೆನಹುಗಣಿ.
ಕೃತಜ್ಞತೆಯ ಕಣ್ ಕೋರೈಸುವೋಲ್ ! ದೇಹಮಂ
ಕಾಣ್ಕೆಗೈದಿರಿ ದೇವ ಧನ್ವಂತರಿಯ ಗುಡಿಗೆ;
ಪ್ರಾಣಮಂ ಕೊಂಡೊಯ್ದು ಭಾಗೀರಥಿಯ ತಡಿಗೆ
ಮೀಯಿಸಿದಿರದನು ಗುರುಮಂತ್ರದಿಂ. ಸ್ನೇಹಮಂ
ಸವಿಯೊಡ್ಡಿ, ಶಿವಲಲಾಟಾಕ್ಷಿಯೊಳ್ ಅಭೀತಿಯಿಂ
ಚರಿಸುವಂತೆಸಗಿಹಿರಿ. ಸಂನ್ಯಾಸಯೋಗದಿಂ
ಧರ್ಮಗರ್ವದ ಸೋಂಕು ಸುಳಿಯದಾ ಪ್ರೀತಿಯಿಂ
ಸಾಮಾನ್ಯತೆಯನಾಂತು, ಕಲೆಗಳನುರಾಗದಿಂ
ರಸಯೋಗಿಯಾಗಿರ್ಪ ನೀಮೆ ಶಾಂತಿಯ ಭಟಂ,
ಮೇಣ್ ಆತ್ಮದಾನಂದ ಸಿದ್ಧೇಶ್ವರನೆ ವಿಟಂ !

# ಚಂದ್ರಗ್ರಹಣ ಮತ್ತು ಸಾಕ್ರೆಟೀಸ್

ಸೂರ್ಯನಂ ಸುತ್ತುತಿಹ ಪೃಥ್ವಿಯ ಮಹಾಛಾಯೆ
ಬಹುದೂರದಾಕಾಶದೇಶದಿ ಚಲಿಸಿ ಬೀಳೆ
ದೃಗ್ಗಣಿತ ನಿಯಮದಿಂದಿಂದುಗೋಲದ ಮೇಲೆ
ಗ್ರಹಣಮಹುದೆಂದು ವಿಜ್ಞಾನ ತೋರಿದೆ. ಮಾಯೆ
ಹಿಡಿದಿರುವುದೆಮಗೆ! ಚಂದ್ರನಿಗೆಲ್ಲಿಯದು ರಾಹು?
ಬಾ, ಸನ್ಮತಿಯ ದೀಪಧಾರಿ, ಓ ಸಾಕ್ರೆಟೀಸ್,
ನಮ್ಮ ಭಾರತವಿಂದು ನೀನು ಬರಲಿರ್ದ ಗ್ರೀಸ್!
ಕೊಲ್ಲುತಿಹುದಜ್ಞಾನ ಸಂಪ್ರದಾಯದ ಬಾಹು
ನಮ್ಮ ಬದುಕಿನ ಕುತ್ತಿಗೆಯ ಹಿಸುಕಿ. ನಾಸ್ತಿಕತೆ
ನಷ್ಟಹಾನಿಯ ದುಷ್ಟಮೌಢ್ಯಕಿಂತತಿ ಲೇಸು!
ಗುರು ಬುದ್ಧದೇವ ನಾಸ್ತಿಕನಾದರವನ ಜೊತೆ
ನರಕವೆನಗಿರಲಿ. ಮೇಣಂತೆ ಕ್ರಿಸ್ತನ ಕ್ರಾಸು
ಯಜ್ಞಯೂಪದ ಪಾಪಗಳ ತೊಳೆವ ಪುಣ್ಯಕಥೆ.
ದಾಸ್ಯಮತಿ ಸೈತಾನ್; ನಿರಂಕುಶಮತಿಯೆ ಯೇಸು

# ಬಲಿಪಾಡ್ಯಮಿ

ಕರುಬುವಿಂದ್ರನನುಳುಹೆ ಹರಿಯು ವಾಮನನಾಗಿ
ಮೂರಡಿ ನೆಲನ ಬೇಡೆ ಧಾರೆಯೆರೆದೊಲಿದಿತ್ತೆ;
ಕೈತವದೊಳವನೋ ತ್ರಿವಿಕ್ರಮನೆ ತಾನಾಗಿ
ಸರ್ವಸ್ವವನು ಸುಲಿದು ಪಾತಾಳದಡಿಗೊತ್ತೆ,
ದೇವನನ್ಯಾಯವನು, ಹೇ ಮಹೋದಾರ ಬಲಿ,
ಕೃಪೆಯೆಂದು ಸಹಿಸಿದಾತನು ನೀನಸುರನಲ್ಲ!
ದೇವತೆಗಳಾಚರಿಸೆ ರಾಕ್ಷಸರ ರೀತಿಯಲಿ
ದೇವತ್ವವನು ಹೊರೆದ ನೀಂ ದೇವನೆಮಗೆಲ್ಲ!
ಹರಿ ತುಳಿದರೇನಂದು? ನರನು ಪೂಜಿಪನಿಂದು!
ಹೆರರ ಮೇಲ್ಮೆಗೆ ಕರುಬಿ ಕುದಿದಿಂದ್ರನಿಂದೆಲ್ಲಿ?
ಪೂಜಿಸುವರಾರಾತನನು? ಪಾಳ್ಗುಡಿಯ ಹೋಲಿ
ಹೂವು ಗಂಟೆಗಳಿಲ್ಲದಾಗಿಹನು; ಎಂದೆಂದು
ನರರ ವಿಸ್ಮೃತಿಯ ಪಾತಾಳದಂಧತೆಯಲ್ಲಿ
ಬಿದ್ದಿಹನು: ಅಃ ದೇವನೆಂತೂ ಕೃಪಾಶಾಲಿ!

# ಕಂಸಶಿಲೆ

ನೀನೊಬ್ಬನೆಯೆ ಅಲ್ಲ, ಸಾವಿನಳುಕಿಗೆ ಸಿಕ್ಕಿ,
  ಮುದ್ದಾಡಲರ್ಹವಹ ಶಿಶುಗಳೇಳನು ಶಿಲೆಗೆ
  ಬಡಿದು ಕೊಂದೆಂಟನೆಯುದರ ಕೈಲಿ ಸೀಳ್ಗೊಲೆಗೆ
ತುತ್ತಾದವನು, ಕಂಸ : ನಮ್ಮೆದೆಗಳನು ಕುಕ್ಕಿ
ನೋಡಿದರೆ ಕಾಣುವುದು ಮಕ್ಕಳೆಲುಬಿನ ರಾಶಿ !
  ಒಂದೊಂದು ಹೃದಯವೂ ಕಂಸಶಿಲೆ : ನೂರಾರು
  ಹೊಂಗನಸಿನಾದರ್ಶಶಿಶುಗಳಾಯೆಡೆ ಚೂರು.
ಚೂರಾದರೇನ್ ? ತುದಿಗೆ ಗೆಲುವನಸುರದ್ವೇಷಿ
ಧ್ವಂಸಗೈದಾ ದೇವವೈರಿಯಂ.—ಬಾಲ್ಯದಿಂ
  ಕಟ್ಟುವೆವು, ಕೆಡಹುವೆವು; ಹಳಿವೆವೊಲಿವೆವು ಮತ್ತೆ ;
    ಕಿಚ್ಚಿಟ್ಟೊಲುಮೆ ಬೂದಿಯಾಗೆ ಮತ್ತೊಂದೊಲುಮೆ
ಮೋಹಿಪುದು ಬಿಗಿದಪ್ಪಿ. ರುಚಿಯ ಚಾಪಲ್ಯದಿಂ
  ತುಟಿಯಿಡುವೆವಾ ಕೊಳಕೆ ಈ ಕೊಳದ ನೀರ್ ಬತ್ತೆ.–
    ಕೃಷ್ಣನೈತರ್ಪನ್ನೆಗಂ ಕಂಸನೆದೆ ಕುಲುಮೆ.

# ಅಶೋಕ ಚಕ್ರವರ್ತಿ

ಗರುಡಗಹಿಯೆಂತಂತೆ ದೊರೆಗಳೆಂದರೆ ನನಗೆ!
 ನಿನ್ನನಾದರೆ ನೆನೆಯೆ, ಪೆರ್ಮೆಯಿನೆದೆಯು ಶೋಕ,
 ದಿವಿಜರ್ಗೆ ಪ್ರಿಯನೆ ಹೇ ಚಕ್ರವರ್ತಿ ಅಶೋಕ,
ಹರಿಯುವುದು ತಾಂ ಕಂಗಳಂಜಲಿಯಾಗಿ ನಿನಗೆ!
ಕಾಲನದಿ ಕೊಚ್ಚಿಬರೆ ಏನುಳಿಯುವುದು ಕೊನೆಗೆ?
 ಹೇಳುವರು: ರವಿ ತಣ್ಣಗಾಗಿ ಮಡಿವುದು ಲೋಕ;
 ಸಂಸ್ಕೃತಿವೆರಸಿ ನರನಳಿವನೆಂದು! ಅದೆ ನಾಕ?
ತುತ್ತತುದಿಗೆಲ್ಲ ಕತ್ತಲೆಯು ಮೌನದ ಮನೆಗೆ!—
ಇಲ್ಲ! ಆ ನಿರ್ವಾಣದಲ್ಲಿಯೂ ನಿನ್ನ ಎದೆ
 ಮೇಣೊಲ್ಮೆ ಬಾಳದಿರೆ, ನಿರ್ವಾಣವದುವೆ ಹುಸಿ!
  ಜಯವಿದ್ದು, ಬಲವಿದ್ದು, ಜಯಿಸೆ ದೇಶಗಳಿದ್ದು,
ಮೈತ್ರಿಯಿಂ ಮೃದುವಾಯ್ತು ತವ ವಜ್ರಶಕ್ತಿಗದೆ!
 ರಾಜನಾಗಿದ್ದರೇಂ? ನೀಂ ದಿಟದಿ ರಾಜಋಷಿ!
  ಯುದ್ಧರುಜೆಗೆಂದೆಂದಿಗೂ ನೀನರಸುಮದ್ದು!

# ಧನ್ಯೆ ದಲ್ ಲಕ್ಷ್ಮಿ !

ಸರಸತಿಯ ಬೀಣೆಗೊದಗಿಸೆ ತಂತಿಯಂ, ಧನ್ಯೆ
ದಲ್ ಲಕ್ಷ್ಮಿ! ಲೌಹನಿನದಮೆ ವೈಣರವವಾಗಿ
ಪೊರೆವುದು ಚಿರಂತನದ ಸುರಗಾನದಿಂ, ತ್ಯಾಗಿ,
ನಿನ್ನ ಜಸಮಂ ವಿಸ್ಮೃತಿಯ ಮೃತ್ಯುವಿಂ. ಮುನ್ನೆ,
ವಿಕ್ರಮಾರ್ಜುನ ವಿಜಯಮಂ ಬರೆದು, ಪಂಪಕವಿ
ಕೊರೆದನರಿಕೇಸರಿಯ ಪೆಸರಂ ಚಿರಂ ಬಾಳ್ವ
ಕೃತಿಶಿಲಾಶಾಸನದಿ. ಕಾವ್ಯವೋದುವ ಕೇಳ್ವ
ಕನ್ನಡಿಗರೆಲ್ಲರ ಕೃತಜ್ಞತೆಗೆ, ಚಂದ್ರರವಿ
ಪೊಳೆವನ್ನೆಗಂ, ಪಾತ್ರನಾಗಿರ್ಪನಾ ನೃಪತಿ,
ತನ್ನುಳಿದ ಕಜ್ಜಗಳ್ ತನ್ನ ರಾಜ್ಯಂಗೂಡಿ
ಪೇಳೆ ಪೆಸರಿಲ್ಲದಾಗಿರ್ಪೊಡಂ. ದಿವ್ಯಕೃತಿ,
ಹೇ ಧನಿಯೆ, ನಿನ್ನ ದಾನವನಮೃತಮಂ ಮಾಡಿ,
ನಿನ್ನಾತ್ಮಕಮೃತತೃಪ್ತಿಯನೀವುದಾವಗಮ್ :
ನಿನಗಕ್ಕೆ ಆ ಸ್ವೈಪಿನಾ ಶಾಂತಿಯಾ ಸೊಗಮ್.

ವಿಶ್ವವಿದ್ಯಾನಿಲಯವೊಂದರ ಪ್ರತಿಷ್ಠಾಪನೆಗಾಗಿ ವಿಪುಲಧನಾರ್ಪಣೆ
ಮಾಡಿದ ಮಹಾದಾತೃವೊಬ್ಬನ ನೆನಪಿಗಾಗಿ

# ದೇಶಭಕ್ತನ ಬಯಕೆ

ತಾಯಿ ಭಾರತಿ, ನಿನಗೆ ಸ್ವಾತಂತ್ರ್ಯ ಬಹ ಮುನ್ನ
ನಾನಳಿವೆನೇನೊ ಎಂಬಾ ಶಂಕೆಯೊಮ್ಮೊಮ್ಮೆ
ಪೀಡಿಪುದು ಮನಮಂ. ಸ್ವತಂತ್ರಿ ಎಂಬುವ ಹೆಮ್ಮೆ
ಈ ಜನ್ಮದಲಿ ನನಗೆ ಲಭಿಸದಿರೆ, ಮತ್ತೆನ್ನ
ಮರುವುಟ್ಟಿನಲ್ಲಾದೊಡಂ ಪೆತ್ತು ಈ ನಿನ್ನ
ಕಂದನ ಬಯಕೆಯಂ ಸಲಿಸಿ, ದೇವಿ, ಕೃಪೆದೋರು !
ಹುಟ್ಟಿಸೆನ್ನಂ ಮರಳಿ ಮರಳಿ, ಬಂಧನ ನೂರು
ಚೂರಾಗಿ ನಿನಗೆ ಮೋಕ್ಷಂ ಪೂರ್ಣ ದೊರೆವನ್ನ !
ಹಿರಿದಹುದು ಸಂಕೋಲೆ ; ಕಿರಿದು ನನ್ನೀ ಒಲ್ಮೆ.
ಆದೊಡೇಂ ? ಪೊಳ್ತನಿತ್ತರೆ ಒರಲೆ ಕೊರೆ ಕೊರೆದು
ಕೆಡಹಲಾರದೆ ಹೆಮ್ಮರನ ? ಅಂತೆಯೇ ಒಲ್ಮೆ
ಹಿರಿದಾಗಿರಲು ಬಲ್ಮೆಕಿಡಿ ತಾನೆ ಕಾಳ್ಗಿಚ್ಚು
ಕಾಲಾನುಕಾಲಕ್ಕೆ ! ಹೀನ ಸ್ವಾರ್ಥವ ತೊರೆದು
ಸ್ವಾತಂತ್ರ್ಯ ಮುಖಕೆ ಪಶುವಹುದೆನ್ನ ಸಿರಿಹುಚ್ಚು.

# ಚಿತ್ರಭಾನು

ಸುತ್ತಿದನು ಪೃಥ್ವಿಯಂ ಸಮರಶೇಷಂ, ತನ್ನ
  ನಾನಾ ರಣದ ಫಣೆಗಳಂ ನಿಮಿರಿ, ಮೃತ್ಯುಮಯ
  ಗರಳದಿಂ ದೇಶದೇಶದ ಬಾಳ್ಗೆ ಕಷ್ಟ ಭಯ
ಶೋಕ ರುಜೆ ದಾಸ್ಯಗಳನಡಕಿ. ಕೊಲ್ಲುವಮುನ್ನ
ಕಾಳಕೂಟವ ಕುಡಿವ ಕೈಲಾಸಪತಿಯೆಲ್ಲಿ?
  ಬಹನೊ? ಶಾಂತಿಯು ತಹನೊ? ಕಣಿಯನೊರೆಯುವರಾರು?
  ಅಟ್ಲಾಂಟಿಕದ ಬಿಸಿಗೆ ಶಾಂತ ಶರಧಿಯ ನೀರು
ತಕಪಕನೆ ಕುದಿಯ ತೊಡಗಿರೆ, ಬರಿಯ ಬಲದಲ್ಲಿ,
ಕಾಣೆನಾಂ ಪಾರ್ವತಿಯ ಕೃಪೆಯ ಕೈಯಂ. ಮತ್ತೆ ?—
  ಸೋಲ್ವುವೆ ಜನಾಂಗಗಳ್ ವ್ಯಕ್ತಿ ಸೋಲ್ವಂತೆವೋಲ್?
    ಇಂದು ಸೋತುದೆ ಮುಂದಕಿರ್ಮಡಿಯ ರೋಷದಿಂ
ಮಲೆತು ಕೆಣಕದೆ ಯುದ್ಧಭೂತಮಂ?—ಬರಿ ಮಿಥ್ಯೆ
  ಶಾಂತಿ, ಜರ್ಮನ್ನಿಗಂ ಸಮತೆ. ವೇದವಿದು ಕೇಳ್:
    ಶಾಂತಿಗೊಂದೇ ದಾರಿ, -- ಸರ್ವಸಂತೋಷದಿಂ!

ಚಿತ್ರಭಾನು: ೧೯೪೨ ನೆಯ ಇಸವಿ; ಎರಡನೆಯ ಮಹಾಯುದ್ಧದ ಮಧ್ಯ ಕಾಲ; ಯುದ್ಧ ಜ್ವಾಲೆ ಪೂರ್ವರಾಷ್ಟ್ರಗಳಿಗೂ ಪೂರ್ಣವಾಗಿ ಹಬ್ಬಿ, ಜಪಾನು ಯುದ್ಧದ ಅಗ್ನಿಕುಂಡಕ್ಕೆ ಧುಮುಕಿದ ಸಮಯ.

# ಕ್ರಾಂತಿಕಾಳಿ

ಕ್ರಾಂತಿಕಾಳಿ ಕಠಾರಿಯುಂ ನನ್ನೆದೆಗೆ ಕುರಿತು
ಝುಳಪಿಸುತೆ, ಬದ್ಧಭ್ರುಕುಟಿ ಕೋಪದಲಿ ನಿಂತು,
ದಂಷ್ಟ್ರಘರ್ಷಣರವಂ ಪೊಣ್ಮೆ ಗಜರಿದಳಿಂತು : —
ಓ ದ್ರೋಹಿ ಕವಿಯೆ, ನಿನಗಿತ್ತಾಣತಿಯ ಮರೆತು
ಕ್ಲೀಬತನದಲಿ ಹೆಣ್ಣುಸೋಬಾನೆಗಳ ಹಾಡಿ
ಪಾಳ್ಗೆಯ್ದೆ ಕಜ್ಜಮುಂ! ಶುಕ, ಪಿಕ, ವಸಂತ, ಲತೆ,
ಮುಂಗುರುಳು, ತಂಗಾಳಿ, ದೊರೆಗಿರೆಗಳಜ್ಜಿಕಥೆ,
ಬೆಳ್ದಿಂಗಳೆಂಬುವಂ ನೂಕಾಚೆ, ಹೆಂಬೇಡಿ!
ಬಡತನಂ, ಗೊಬ್ಬರಂ, ಕತ್ತಿ, ಗುದ್ದಲಿ, ಹಾರೆ,
ಬೆವರು, ನೆತ್ತರ್ಗಳಂ ಗಾನಗೈವುದು ನಿನ್ನ
ಕರ್ತವ್ಯವಿಂದು. ಹಾ! ಹೊಟ್ಟೆಗಿಲ್ಲದೆ ಅನ್ನ
ಬಡಜನರು ಸಾಯುತಿರೆ, ರಸಗಂಧವನು ತೋರೆ
ತಣಿವಹುದೆ? ಕ್ರಾಂತಿಕಾಳಿಯು ನಾನು, ಕೈಬೀಸಿ
ಕರೆಯೆ, ಬಾ, ಪೂಜೆಗೈ ಹೃದಯ ರಕ್ತವ ಸೂಸಿ!

# ಬೆಕ್ಕು—ಇಲಿ

## ೧

ಊರಿನ ಕೊಳೆಯನೆಲ್ಲ ತೊಳೆವ ನಿನಗೆಯೆ ತೊಳೆಯ
ನೀರಿಲ್ಲ, ಓ ತೋಟಿ! ಹಣವಂತರಿಗೆ ತೊಟ್ಟೆ
ಮನೆಗಳನು ಕಟ್ಟುವ ನಿನಗೆ ಮಲಗೆ ಬಡಹಟ್ಟಿ
ಗತಿಯಿಲ್ಲ, ಓ ಕೂಲಿಗಾರ! ಪೈರನು ಬೆಳೆಯೆ
ನೀನು, ಲೋಕಕೆ ಕೂಳು; ಆದರುಣ್ಣಲು ನಿನಗೆ
ಕಾಳಿಲ್ಲ, ಓ ರೈತ! ತಿಂದು ಧನಿಕರ ಬುತ್ತಿ
ತೇಗುತಿದೆ; ಬಡಜನರೊ ಹೊಟ್ಟೆ ಬೆನ್ನಿಗೆ ಹತ್ತಿ
ನರಳಿ ಹೊರಳುತ್ತುರುಳುತಿರುವರು ಜವನ ಮನೆಗೆ.
ಕೈಗೆ ಕೈದುಗಳಿಲ್ಲ; ಬಾಯ್ಗೆ ವಾಗ್ಮಿತೆಯಿಲ್ಲ;
ಮೈಲಿ ರಕ್ತದ ಬಿಂದುವಿಲ್ಲ. ರಾಜ್ಯದ ಭಾರ,
ನಿಮ್ಮ ಮೂಳೆಯ ಮೇಲೆ; ರಾಜ್ಯಭಾರದ ಸೂತ್ರ
ಪಾತ್ರ ನಿಮಗಿಲ್ಲ. ಶ್ರೀಮಂತ ಬೆಕ್ಕುಗಳೆಲ್ಲ
ಸಭೆಸೇರ್ದರಾದಂತೆ ಬಡಇಲಿಗಳುದ್ಧಾರ!
ಕೊಬ್ಬಿದರು ಕುರಿಗಲ್ಲ ಹಬ್ಬ; ಕುರುಬಗೆ ಮಾತ್ರ!

# ಲೆನಿನ್

ಧಮನಿಯಲಿ ಬಿಸಿನೆತ್ತರುಕ್ಕದೆ ನೆನೆಯಲಾರೆ
ನಿನ್ನಂ, ಲೆನಿನ್! ನಿನ್ನ ಹೆಸರದು ಸಿಡಿಲ್‌ಸದ್ದು
ದೊರೆಗಿವಿಗೆ; ನಿನ್ನ ಸಮತಾಬೋಧೆ ಸಿಡಿಮದ್ದು
ನರನ ಸಂಗ್ರಹ ಬುದ್ಧಿ ಸ್ವಾರ್ಥತೆಯನುರಿದೋರೆ
ದಹಿಸಿ, ನಿಃಸ್ವಾರ್ಥತೆಯ ಬೆಂಕಿಯಿಂ ಹೃತ್ಕುಂಡ
ಸರ್ವದಾ ಪ್ರಜ್ವಲಿಸುವಂತೆಸಗೆ. ಜಮದಗ್ನಿ
ಸುತನಂತೆ ನೀನು ಪಾರ್ಥಿವ ಕುಲಕೆ ಬಡಬಾಗ್ನಿ!
ದುಡಿವ ದೀನರ ದೈವವನ್ಯರ್ಗೆ ಯಮದಂಡ!
ಗೆಯ್ಯುವರ್ಗೇನಿಲ್ಲ, ಕುಳಿತುಂಬರಿಗೆ ಬೆಲ್ಲ;
ಮುಳ್ಳುನೋವಾಳಿಂಗೆ, ಕಂಪು ಹೂವೊಡೆಯಂಗೆ;
ಗೋಳವಗೆ, ಸೊಂಪಿವಗೆ. ಈ ತರತಮವನೆಲ್ಲ
ಮುರಿಯೆ ಬಹನಲ್ಲಲ್ಲಿ ಕಲ್ಕಿ. ರಕ್ತದ ಗಂಗೆ
ಸಿರಿ ನಾಳದಿಂ ಮರಳಿ ಬಡತನದೊಣಗು ಮೈಗೆ
ಹರಿದಕ್ಕೆ ದೊರೆಗಳಸಿ ಕೂಲಿರೈತರ ಕೈಗೆ!

# ಆಸ್ಪತ್ರೆ

ಯಂತ್ರದ ದಯೆಯು ಮೃಗದ ನಿಷ್ಕರುಣೆಗಿಂತಲೂ
  ಕ್ರೂರತರವಾದುದೈ! ಎದೆಯಿಲ್ಲದುಪಕಾರ,
  ಕತ್ತಲೆಯ ಭಯದಂತೆ, ಭೀಷಣ, ನಿರಾಕಾರ!
ಕ್ರೌರ್ಯಮೇ ಲೇಸು ಔದಾಸೀನ್ಯಕಿಂತಲೂ!
ಆಸ್ಪತ್ರೆಯೇನು ಯಂತ್ರಾಲಯವೆ? ನೀವೇನು
  ಯಂತ್ರಗಳೆ, ವೈದ್ಯರಿರ? ಬರುವ ರೋಗಿಗಳೆಲ್ಲ
  ಮುರಿದ ಮೋಟಾರುಗಳೆ? ಅವರು ಜೀವಗಳಲ್ಲ?
ಅವರಿಗೆ ಹೃದಯವಿಲ್ಲ?—ವೈದ್ಯವರ್ಯನೆ, ನೀನು
ಪ್ರಿಯನಲ್ಲವೇನಯ್ಯ ಸೌಂದರ್ಯವತಿ ಸತಿಗೆ?
ಪಿತನಲ್ಲವೇನಯ್ಯ ಪ್ರೀತಿಯ ಕುಮಾರನಿಗೆ?
  ಹೆತ್ತತಾಯಿಗೆ ಮುದ್ದು ಮಗನಲ್ಲವೇನಯ್ಯ?
ಮೂವರಿರಲೊಬ್ಬನೊಳೆ, ನಿನ್ನ ರೋಗಿಯ ಗತಿಗೆ,
ತಾಯ್ತಂವೆ ಸತಿಸುತರು ಕರೆವ ಬಿಸುಗಂಬನಿಗೆ,
  ಮನಮರುಗಿ ನರನಾಗಿ ನರನನುಪಚರಿಸಯ್ಯ!

# ಟಾಲ್‌ಸ್ಟಾಯ್

ಬಾಳ ಕೊಳುಗುಳದಲ್ಲಿ ಬೀರ ತುಳಿಲಾಳಾಗಿ
ಹೋರಿಯಂದದಿ ಹೋರಿ ಮಡಿದ ನಿನ್ನಾ ಮೃತ್ಯು
ಧರ್ಮಕ್ಷುಧೆಗೆ ಚಿರಂಜೀವದಮೃತದ ತುತ್ತು,
ಟಾಲ್‌ಸ್ಟಾಯ್ ! ನಿರಂಕುಶಮತಿಯೆ, ಶಮದಮಕ್ಕಾಗಿ
ಸವೆದೆ ನಿನ್ನಾತ್ಮಮಂ. ಸೌಖ್ಯದ ಸಿರಿಯ ತೊರೆದು
ದುಃಖದಾರಿದ್ರ್ಯಮಂ ಕೆಳೆಗೊಂಡೆ. ಬೇಸತ್ತು
ಮತದ ಬೂಟಾಟಿಕೆಗೆ, ಅದರ ಹುತ್ತವ ಕಿತ್ತು,
ಬೆಳ್ಕೊರಲೆಗಳ ನೊಣೆಯೆ ವಿಪ್ಲವ ಫಣೆಯನಿರಿದು
ಕೆರಳಿಸುತೊಳಗೆ ಬಿಟ್ಟೆ ! ಕ್ರಾಂತಿಕಾರನೆ ಮಾತ್ರ
ನೀನಲ್ತು ; ಕಾವ್ಯರಸನಂದನ ಕೃಷಿಕನಾದೆ.
ಮನುಜ ಜೀವನ ರಂಗ ಭೂಮಿಯಲಿ ತವಪಾತ್ರ
ನೈಕಮುಖಿ. ಸಾಧಕವರೇಣ್ಯ, ಸತ್ಯದ ಬೋಧೆ
ನಿನ್ನಿಂದೆ ಮಿಂಚಾಯ್ತು.— ಹೋರಾಡುತಲೆ ಬಿದ್ದೆ ;
ಸೋತಂತೆ ತೋರ್ದರೂ, ರಸಋಷಿ, ದಿಟದಿ ಗೆದ್ದೆ !

# ಮಾದೇಶ್ವರನ ಬೆಟ್ಟಕಂತೆ !

ಕಲ್ಲು ಕೋಂಟೆಯ ಸೆರೆಯು ಸೆರೆಯಲ್ಲ; ಬಗೆಸೆರೆಯ
ಭೀಷಣ ಬಲಿಷ್ಠತೆಗುಪಮೆಯಿಲ್ಲ. ಕಬ್ಬಿನದ
ಸಂಕೋಲೆಗಿಂ ಚಿರಂ, ಕ್ರೂರಕಠಿನಂ, ಮನದ
ಮೂಢತೆಯ ಕಪಿಮುಷ್ಟಿ. ಧನಿಕತೆ ಮತದ ಮರೆಯ
ತನುತರ ನಿಗಳದಿಂದೆ ಮಂದಿಯಂ ಬಂಧಿಸಿದೆ;
ಪರಸುಖಂ ನಿಮಗೆನುತ್ತಿಹದೊಳವರನು ಹೀರಿ
ಸಾಮ್ರಾಜ್ಯವಾಳುತಿದೆ, ಸವಿ ಹೊಂಗನಸು ತೋರಿ.
ತನ್ನ ಸುಳ್ಳಿಗೆ ತಾನೆ ಗುಡಿ ಕಟ್ಟಿ ವಂದಿಸಿದೆ!
ಮಾದೇಶ್ವರನ ಬೆಟ್ಟಕಂತೆ, ಅದೊ ನೋಡಲ್ಲಿ,
ನಡುಹಗಲಿನುರಿಬಿಸಿಲಿನಲಿ ಕೂಗಿಕೊಳ್ಳುತ್ತೆ
ಬಿಡುಮುಡಿಯ ಪರಿದುಡೆಯ ಹೊಟ್ಟೆಗಿಲ್ಲದ ಹಳ್ಳಿ
ಹೋಗುತಿದೆ ! ಕೂಸುಗಳೊ ಬಿರುಸೆಕೆಗೆ ಸೀಯುತ್ತೆ
ತಾಯ್ಗಳೆದೆಗೊರಲುತಿವೆ !—ಮೌಢ್ಯಕಿಂ ಪೋಲೀಸೆ ?
ಕರ್ಬೊನ್ನ ಸರಪಣಿಯು ಮತದಫೀಮಿಗೆ ಲೇಸೆ?

# ರಾಷ್ಟ್ರೀಯ ವಿಷಮತೆ

ಉದುರುತಿವೆ ಹಣ್ಣೆಲೆಗಳೊಂದಾದ ಮೇಲೊಂದು ;
ಬಂದಂತೆ ತೋರುತಿದೆ ನಮ್ಮ ನಾಡಿಗೆ ಮಾಗಿ.
ಹೆಪ್ಪುಗಡುತಿಹುದೆದೆಯ ಕೆನ್ನೀರು ಚಳಿ ತಾಗಿ ;
ಸುಕ್ಕು ತೋರುತಿದೆ ಮುಖದಲ್ಲಿ. ಕುಳಿರಲಿ ಮಿಂದು
ಯುವಕ ತರು ವೃಂದವೂ ಮೃತವಾದವೊಲು ನಿಂದು
ಆಸೆಗೆ ನಿರಾಶೆಯನೆ ನೀಡುತಿದೆ. ಚಳಿ ಹೋಗಿ,
ಬಿಸಿಯ ಬಿಸಿಲೈತಂದು, ಮುದದಿ ಕೋಗಿಲೆ ಕೂಗಿ,
ಮೃದುಲ ಪಲ್ಲವ ನವ್ಯ ದಿವ್ಯಚೇತನ ಸಿಂಧು
ಮಧು ಮಹಾತ್ಮನು ತಾನು ಎಂದಿಗೈತಂದೆಮಗೆ
ಮತ್ತೆ ಮೊದಲಿನ ನೆಚ್ಚು ಕೆಚ್ಚುಗಳನೆದೆಗಿತ್ತು
ಸಲಹುವನೊ ಎಂದಳುಕಿ, ಜೀಸತ್ತು, ತಮತಮಗೆ
ಉತ್ಸಾಹ ಹೀನರಾಗದಿರಿ : ಏಕೆನೆ, ಬಿತ್ತು
ಲಯವಾಗುವುದೆ ಮೊಳಕೆಗಾಯುಸ್ಸು. ಮುನ್ನುಗ್ಗಿ,
ತಳಿರುಗಳೆ, ಕಾಯುತಿದೆ ನಿಮಗಾಗಿ ಹೊಸಸುಗ್ಗಿ !

# ತ್ಯಾಗವಿಲ್ಲದ ದೇಶಭಕ್ತಿ ಕ್ಲೈಬ್ಯಕೆ ಯಷ್ಟಿ

ನರಳುತಿಹುದಡಿಗಲ್ಲು ಹರ್ಮ್ಯಭಾರವ ಹೊತ್ತು
ಭೂಗರ್ಭ ತಿಮಿರದಿ ಸಿಲುಕಿಬಿದ್ದು ; ನಭಕೆತ್ತಿ
ಕಾರ್ತಸ್ವರಾಲೇಪನದ ಗೋಪುರದ ನೆತ್ತಿ
ನಗೆಮಿಂಚನೆಸೆದು ತಳಹದಿಯುನಣಕಿಸಿದತ್ತು !
ಸಿರಿಯ ಕಳಶದ ಕಿವಿಗೆ ಬಡ ತಳಹದಿಯ ಗೋಳು
ಬೀಳುವುದೆ ? ರಜತ ಜಿಹ್ವಾ ವಾಗ್ಮಿ, ಹಸಿದ ಹುಲಿ
ನಖದಂಷ್ಟ್ರಗಳನೆ ಕಾಣಿಕೆಯಿತ್ತು ಕಾಲಬಳಿ
ಮೂಲಗಿಸಲದನಾವ ಹೆಸರಿಂ ಕರೆವೆ ಹೇಳು ?
ಬೆಳ್ಳಿನಾಲಗೆ ಸಾಲದಯ್ಯ, ವಜ್ರದ ಮುಷ್ಟಿ
ಬೇಕಿಂದೆಮಗೆ : ಸೆರೆಯ ಕಬ್ಬಿಣ ಸರಳನೊಡೆಯೆ,
ನುಣ್ಪು ನಾಯಕರಲ್ಲ, ಬೇಕೆಮಗೊರಟು ಮಂದಿ.
ತ್ಯಾಗವಿಲ್ಲದ ದೇಶಭಕ್ತಿ ಕ್ಲೈಬ್ಯಕೆ ಯಷ್ಟಿ !
ನೋಯಿಸಲು ಮನಸುಂಟು, ಕೆಚ್ಚು ಸಾಲದು ಹೊಡೆಯೆ !
ಸಮರ ಸಾಹಸರಾಹ ! ಮಾತೆತ್ತಿದರೆ ' ಸಂಧಿ ' !

# ದೇಶಭಕ್ತನೊರ್ವನಿಗೆ

ಶ್ರೀಕೃಷ್ಣನೆಂದನಂದರ್ಜುನಗೆ " ಹೇ ಪಾರ್ಥ,
ಕೀಳಾದೊಡಂ ತನ್ನ ಧರ್ಮದೊಳಳಿವೆ ಲೇಸು ;
ಮೇಲಾಗಿ ತೋರ್ದಡಂ ಪರಧರ್ಮವದು ಹೇಸು,
ಭೀಕರಮುಜಯಕರಂ ; ತನಗನರ್ಥಂ, ವ್ಯರ್ಥ
ಅನ್ಯರಿಗೆ. " ಕಬ್ಬಿಣದ ಕರ್ಮ ಕಬ್ಬಿಣಕೆ ಹಿತ.
ಗಣಿಯಿಂದಮಲ್ತು ಗುಣದಿಂದೆ ಲೋಹದ ಕರ್ಮ
ನಿರ್ಣಯಂ. ಗುಣವರಿತ ನಡೆಯೆ ಯೋಗದ ಮರ್ಮ.
ಹೊರಗೊಳಗನಾಳ್ವ ಆ ಕಟ್ಟಳೆಯೆ ದಿವ್ಯ ಋತ.
ದೇಶಭಕ್ತನೆ, ನಿನ್ನ ಕರ್ಮಕೆ ಸುಲಭ ಕೀರ್ತಿ
ದೊರೆಯುತಿದೆ ; ಶೀಘ್ರ ಫಲವೂ ಲಭಿಸುತಿದೆ ಜನಕೆ ;
ನೀನಿಂದು ಲೋಕದಾರಾಧನೆಯ ಶ್ರೀಮೂರ್ತಿ :
ಕರುಬು ನಾಣ್ಗಳ ಸೋಂಕು ಸುಳಿಯದೈ ಕವಿಮನಕೆ !
ಸೌಂದರ್ಯಸೃಷ್ಟಿಯೆ ಕವಿಗೆ ಪೂಜೆ, ಕರ್ತವ್ಯ,
ಜನಸೇವೆ, ಸಾಧನೆ ; ರಸವೆ ಪರಮುಗಂತವ್ಯ !

# ಸತ್ತನೆ ಸೈನ್ಯಪತಿ!

ಭಾರತದ ರಾಷ್ಟ್ರೀಯ ರಣಹೋಮ ಕುಂಡದಲಿ
ಮತ್ತೊಂದು ಯಜ್ಞಪಶು ಬಲಿಯಾಯ್ತು! ನೋಡಲ್ಲಿ,
ದೇಶಭಕ್ತನ ದೇಹ ತನ್ಮಾತ್ರದುರಿಯಲ್ಲಿ
ಬೇಳುತಿದೆ. ಸ್ವಾತಂತ್ರ್ಯದೇವಿ ರೋದಿಪಳು, ಬಳಿ
ನಿಂತು, ಕಂಬನಿಹೊನಲ ಸೂಸಿ.—ಮುಂದೇನು ಗತಿ?
ಸಂದಿಗ್ಧ ಸಮಯದೊಳೆ ಸಮರ ರಂಗವನುಳಿಯೆ
ನೀನಿಂತು, ತಾಯ್ನಾಡಿಗೇನು ಗತಿ? ಓ ಕಲಿಯೆ,
ನಿನ್ನ ಜೀವನ ಸ್ಮೃತಿಯೆ ಇನ್ನೆಮಗೆ ದಳದ ಪತಿ!
ದೇಶದಾಶಾ ನಭವ ಮುತ್ತುತಿಹ ಕಾರ್ಮುಗಿಲು
ದೇದೀಪ್ಯಮಾನ ನಕ್ಷತ್ರಗಳನೂ ಮುಚ್ಚಿ
ಮಬ್ಬುಗೈವಂತಿಹುದು. ಜನರೆದೆಗಳಿಗೆ ದಿಗಿಲು
ಮುಟ್ಟಿದೆ.—ಮಹಾತ್ಮನನೆ ಎಲ್ಲದರೊಳೂ ನೆಚ್ಚಿ
ನಡೆಯಲಾರದೆ ಮಂದಿ ಹಿಂಜರಿಯೆ, ಏನು ಗತಿ?
ವಿಷಮ ರಂಗವನುಳಿಯುವರೆ, ವಂಗಸೈನ್ಯಪತಿ?

# ದೇಶಭಕ್ತನ ಉತ್ತರವಾಣಿ

ಬೆದರದಿರು, ಬೆದರದಿರು; ಬೇಡ ಈ ಸಂದೇಹ,
ಓ ನನ್ನ ಕವಿಮಿತ್ರ. ನಾನಳಿದರೇನಂತೆ?
ಕಾರ್ಮುಗಿಲು ಕವಿದರೇನಂತೆ? ನಿನಗಾ ಚಿಂತೆ
ಬೇಡ; ಬಿಡು ನೈರಾಶ್ಯವನು. ನನ್ನ ಜಡದೇಹ
ಹತವಾಯ್ತು; ನನ್ನಾತ್ಮ ಸಂಗ್ರಾಮ ಗತವಾಯ್ತು.
ಒಬ್ಬನಾಗಿದ್ದವನು ಕೋಟಿಯಾಗಿಹೆನಿಂದು!
ಸ್ವಾತಂತ್ರ್ಯವನು ಕೊಲ್ಲುವರೆ ಒಬ್ಬನನು ಕೊಂದು?
ನನ್ನ ಮೃತ್ಯುವೆ ನನ್ನ ವೈರಿಗೆ ಪತನವಾಯ್ತು.
ಶತಮಾನಗಳು ಬದುಕಿ ಬಾಳಿರುವ ಭಾರತಿಗೆ,
ಲೋಕಕ್ಕೆ ನೂರಾರು ಜೀವಮಣಿಗಳ ಹೆತ್ತು
ದಾನಮಾಡಿಹ ಮಾತೃದೇವತೆಯ ಸದ್ಗತಿಗೆ
ನನ್ನ ನಿಧನದಲಿ ಕುಂದಹುದೆ? ಒಬ್ಬನ ಮಿತ್ತು
ಮತ್ತೊಬ್ಬನೇಳಿಗೆಗೆ ತುತ್ತಲ್ತೆ?—ಪಡುವಲೊಳ್
ತಾರೆ ಮುಳುಗಿತೆ? ನೋಡು, ಮತ್ತೊಂದು ಮೂಡಲೊಳ್!

# ರಸವಿರಲು ಜಸವೇಕೆ?

ನಾ ಬಲ್ಲೆ : ನಕ್ಷತ್ರಗಳು ನೋಡುತಿವೆ; ಸೃಷ್ಟಿ
ಉತ್ಕಂಠಭಾವದಿ ನಿರೀಕ್ಷಿಸುತ್ತಿದೆ ; ಧರಣಿ
ಕಾದಿಹಳು ಕಾತರದಿ ; ಸಂತೋಷದಲಿ ತರಣಿ
ಕಾಣುತಿಹನೆವೆಯಿಕ್ಕದೆಯೆ ; ಜಗತ್ತಿನ ದೃಷ್ಟಿ
ರಮಿಸುತಿದೆ—ನಿನ್ನನೋ ಎನ್ನ ಕಬ್ಬದ ನಲ್ಲೆ !
ಹೂ ಬಳ್ಳಿ ಗಿಡುಮರಂ ಮಲೆ ಹೊಳೆ ಬನಂ ಬಾನು
ಸರ್ವವೂ ಸವಿಯುತಿವೆ, ಭೋಗಿಸುತ್ತಿವೆ, ನಾನು
ಗೈಯುವ ಕಲಾಕರ್ಮಮಂ ! ಬಲ್ಲೆ, ನಾ ಬಲ್ಲೆ !
ಮನುಜನೊಬ್ಬನೆಯಲ್ತು ನಲಿವವನು ಮನಗಂಡು
ನನ್ನ ಕಲೆಯಂದಮಂ : ಗಾನಗೈವಾ ಖಗಂ,
ಮಿರುಗುವಾ ತೃಣದ ಹಿಮಮಣಿ, ಮೇಯುವಾ ಮಿಗಂ
ಸುಖಿಸುತಿಹವದನು ಸಂತಸದಿ ಸವಿಸವಿದುಂಡು !
ಮನುಜ ಕೃಪಣತೆ ದಾನವೀವ ಕೀರ್ತಿಯು ಬೇಕೆ
ಮಮಕಾವ್ಯಕನ್ನಿಕೆಗೆ ? ರಸವಿರಲು ಜಸವೇಕೆ !

# ಯಶೋಲಕ್ಷ್ಮಿ

ವ್ಯೋಮ ಗೋಪುರ ಶಿಖರದಿಂದಿಳಿದು ಬಾ, ಹೇ ಅಮೃತೆ,
ಮಣಿದೆನ್ನ ಮುಡಿಗುಡಿಗೆ : ಶಿವೆ ನೀಂ ತಪೋರೂಪಿಣಿ;
ಚಿರಧವಳೆ ; ಪುಣ್ಯಮಯಿ ; ಲಜ್ಜಾಕರೆ ; ಋತಾನ್ವಿತೆ ;
ಭಗವದಾಶೀರ್ವಾದ ಮೇಣ್ ಕೃಪಾ ಸ್ವರೂಪಿಣಿ !
ನಾನಳಿವ ದಾರಿಯದೆ ನೀನಿಳಿಯುತೈತಹ ಪಥಂ :
ಮರ್ತ್ಯಜಂ ಕೀರ್ತಿಶನಿ ಅಹಂಕಾರ ಖನಿಯಲ್ತೆ ?
ಜನ್ಮಜನ್ಮಕ್ಕೆನಗೆ ನೀಂ ಮೋಕ್ಷಯಾತ್ರಾ ರಥಂ,
ಸ್ಪರ್ಧಾದೂರೆ, ಮತ್ಸರ ವಿದೂರೆ, ಹೇ ಅಮರ್ತ್ಯೆ !
ವಿಪಿನ ಚಂದ್ರಿಕೆಯಂತೆ ಶಾಂತೆ, ನೀರವೆ, ಧನ್ಯೆ,
ಪರಾಭಕ್ತಿಯುದ್ದೀಪನವೆ ತವಾಗ್ನಿಪದ ಚಿಹ್ನೆ !
ಕ್ಷೀರ ವಾರಾಶಿಯೋಲ್ ಕಾಲಲೀಲಾ ಕ್ಷುಬ್ಧೆ
ನೀಂ ನಿತ್ಯಮಕ್ಷುಬ್ಧೆ ; ಮೇಣ್ ಗರ್ವವರಿಯದ ಮುಗ್ಧೆ.
ಸುವಿದಗ್ಧೆಯಾದೊಡಂ :—ಹೇ ಅಸಂಖ್ಯ ಹೃತ್‌ಸಂಗಿನಿ
ಕವಿಯಶೋಲಕ್ಷ್ಮಿ, ನೀನನವರತಮೇಕಾಂಗಿನಿ !

# ಮೊದಲ ಚರಣಗಳು


| | | ಪುಟ |
|---|---|---|
| ಆಂಗ್ಲ ಕವಿಗಳಲಿ ನೀನೆನ್ನೆದೆಯ ಸೆಳೆದಂತೆ | .... | ೫೩ |
| ಇತರರೆನ್ನರು ಹೊಗಳುವರು ಎಂದು ನೀನೇಕೆ | .... | ೩೪ |
| ಇದು ಇರಲಿ! ಅದನು ನೆನೆ: ದಾರಿಯಲಿ ಮುಂದೆಕುರಿ | .... | ೪೪ |
| ಈ ಹೊಳೆಯೊ, ಈ ಕಾನೊ, ಈ ಮಲೆಯೊ, ಈ ಬಾನೊ :— | | ೩೮ |
| ಉದುರುತಿವೆ ಹಣ್ಣೆಲೆಗಳೊಂದಾದ ಮೇಲೊಂದು ; | .... | ೬೯ |
| ಊರಿನ ಕೊಳೆಯನೆಲ್ಲ ತೊಳೆವ ನಿನಗೆಯೆ ತೊಳೆಯೆ | .... | ೬೪ |
| ಎತ್ತ ಸುತ್ತಿದರೇನು ನನ್ನ ಹೃದಯದ ಹಕ್ಕಿ | .... | ೨೧ |
| ಓ ನನ್ನ ಪ್ರಿಯತಮ ಶಿಖರಸುಂದರನೆ, ನನ್ನ | .... | ೮ |
| ಕಬ್ಬಿಗಗೆ ನಿನ್ನೆದೆಯೆ ಕಟ್ಟಕಡೆಯಾಶ್ರಮಂ, | .... | ೧೭ |
| ಕರುಬುವಿಂದ್ರನನುಳುಹೆ ಹರಿಯು ವಾಮನನಾಗಿ | .... | ೫೭ |
| ಕಲ್ಲು ಕೋಂಟೆಯು ಸೆರೆಯು ಸೆರೆಯಲ್ಲ ; ಬಗೆ ಸೆರೆಯು | .... | ೬೮ |
| ಕವನಗಳೆ ಮಂತ್ರಗಳು ರಸಯೋಗಿ ಕವಿಋಷಿಗೆ ; | .... | ೨೬ |
| ಕಾಳಿದಾಸನ ಮಧುರ ಕಾವ್ಯ ಪ್ರಪಂಚದಲಿ | .... | ೧೪ |
| ಕ್ರಾಂತಿಕಾಳಿ ಕಠಾರಿಯಂ ನನ್ನೆದೆಗೆ ಕುರಿತು | .... | ೬೩ |
| ಕುಳಿತಿರುವೆನೇಕಾಂಗಿ ಹಾಸುಬಂಡೆಯ ಮೇಲೆ : | .... | ೪ |
| ಕೆಂಪಡರುತಿದೆ ಮೂಡಣದ್ರಿಯ ನಭದ ಮೇರೆ ; | .... | ೫ |
| ಕ್ಷಣಕ್ಷಣಕೆ ವರ್ಣಾಂತರವನಾಂತು ಮಳೆಬಿಲ್ಲು | .... | ೨೫ |
| ಗಗನವನು ನೋಡು ಮೈ ನೀಲಿಗಟ್ಟುವವರೆಗೆ. | .... | ೨೯ |
| ಗರುಡಗಹಿಯೆಂತಂತೆ ದೊರೆಗಳೆಂದರೆ ನನಗೆ ! | .... | ೫೯ |
| ಗಿರಿಪಂಕ್ತಿ ವನರಾಜಿ ಬುವಿ ಬಾನು ಮುಗಿಲೋಳಿ | .... | ೧ |
| ತಾಯೆ ಭಾರತಿ, ನಿನಗೆ ಸ್ವಾತಂತ್ರ್ಯ ಬಹ ಮುನ್ನ | .... | ೬೧ |
| ತೆರೆಮೇಲೆ ತೆರೆಯೆದ್ದು ಹರಿಯುತಿದೆ ಗಿರಿಪಂಕ್ತಿ | ... | ೯ |
| ದತ್ತುರಿಯ ಹೂವು, ತಾವರೆ, ಕಿತ್ತಳೆಯ ಹಣ್ಣು, | .... | ೪೬ |
| ಧಮನಿಯಲಿ ಬಿಸಿನೆತ್ತರುಕ್ಕದೆ ನೆನೆಯಲಾರೆ | .... | ೬೫ |
| ನಗರದೆದೆಬೇಸರದ ಬೊಬ್ಬೆಗಾಂ ಬೇಸತ್ತು | .... | ೭ |

ನರೆಳುತಿಹುದಡಿಗಲ್ಲು ಹರ್ಮ್ಯಭಾರವ ಹೊತ್ತು .... ೭೬
ನನ್ನ ಕಲೆ ನಿನ್ನ ಸೌಂದರ್ಯದೈಹಿಕ ಛಾಯೆ. .... ೩೪
ನನ್ನ ಭಾವದ ಧೀರ ಭಾರಕ್ಕೆ ವೇಗಕ್ಕೆ .... ೩೮
ನನ್ನ ಹಿತಕೇನು ಬೇಕೆಂಬುದನು ನೀ ಬಲ್ಲೆ .... ೧೯
ನಾಗರಿಕತೆಯನೆಲ್ಲ ತಳ್ಳಿ, ಹೊರೆ ಹೊಣೆಗಳಂ .... ೭೭
ನಾ ನಿನ್ನ ಬಿಡೆನಯ್ಯ, ನನ್ನ ದೇವರು ನೀನು : .... ೩೨
ನಾ ಬಲ್ಲೆ : ನಕ್ಷತ್ರಗಳು ನೋಡುತಿವೆ; ಸೃಷ್ಟಿ .... ೭೪
ನಿನ್ನ ಕರುಣೆಯ ಕಯ್ಯ ನನ್ನುಸಿರನಿನ್ನೆಗಂ .... ೩೦
ನಿಮಗೆ ನಾನಾವ ರೀತಿಯಿಂದೆನಿತು ಋಣಿ .... ೫೫
ನಿರ್ಜನತೆ; ನೀರವತೆ ; ಕಗ್ಗತ್ತಲಲಿ ಧಾತ್ರಿ .... ೧೩
ನೀನು, ಒಬ್ಬನೆ ನಿಂತು ನಭದಿ ತಾರೆಯ ರಾಶಿ .... ೪೨
ನೀನೆನ್ನ ನೆನೆಯುತಿಹೆಯೇನು ಈ ಹೊತ್ತಿನಲಿ .... ೩೩
ನೀನೇರಬಲ್ಲೆಯಾ ನಾನೇರುವೆತ್ತರಕೆ ? .... ೨೦
ನೀನೊಬ್ಬನೆಯೆ ಅಲ್ಲ, ಸಾವಿನಳುಕಿಗೆ ಸಿಕ್ಕಿ, .... ೫೮
ನೋಡಯ್ಯ, ಪ್ರಿಯಬಂಧು, ಚೈತ್ರರವಿಯುದಯದಲಿ .... ೧೦
ನೋಡಿದಷ್ಟೂ ಸಾಲದಿದೆ, ನೋಡೆ, ತನ್ನಂತೆ .... ೪೧
ನೋಯುವುದೊ ಬೇಯುವುದೊ ಸಾಯುವುದೊ ನನ್ನ ಎದೆ,.... ೨೧
ಪಥರಹಿತ ವನರಾಜಿ, ತಣ್ಣೆಳಲು, ತಂಗಾಳಿ : .... ೨
ಪರಮ ಸಂಪೂರ್ಣತೆಯೆ ಕೋಮಲತೆಯೊಡಗೂಡಿ .... ೧೫
ಪ್ರಕೃತಿ ಕಲೆಗಿಂ ಮಿಗಿಲೆ ನರಕೃತಿಯ ಕಲೆ ? ನೋಡ, .... ೪೮
ಪ್ರತಿನಿಧಿ ಮಹಾಪುರುಷನೆಂತು ದೇವರಿಗಂತು .... ೪೦
ಪೀಡಿಸುತ್ತಿಹೆ ಏಕೆ ? ತೊಲಗಾಚೆ, ಕೀರ್ತಿಶನಿ ; .... ೨೫
ಬಳಿಯಿರುವ ವೆಂಕಯ್ಯ ಕಂಠಯ್ಯ ಕಸ್ತೂರಿ .... ೨೬
ಬಾಳ ಕೊಳುಗುಳದಲ್ಲಿ ಬೀರ ತುಳಿಲಾಳಾಗಿ .... ೬೭
ಬೆದರದಿರು, ಬೆದರದಿರು ; ಬೇಡ ಈ ಸಂದೇಹ, .... ೭೨
ಬೇಕಿಹುದನಾಡಬೇಕೆಂಬಾಸೆಯಿಹುದೆನಗೆ. .... ೨೨
ಬೇಸರದ ಬಂದಿಳಿಕೆ ಮನದ ಮಾವಿನ ಮರಕೆ .... ೪೯

ಭವ್ಯವೈಸಲೆ ಮಾನವನ ಮನಂ ಮೇಣ್ ಬಲಂ, .... ೪೨
ಭಾರತದ ರಾಷ್ಟ್ರೀಯ ರಣಹೋಮ ಕುಂಡದಲಿ .... ೭೨
ಭ್ರಮಿಸುತಿದೆ ಮತಿ ; ಬೀಳುತಿದೆ ಕಲ್ಪನೆಯ ಪಕ್ಷಿ .... ೨೭
ಮರುಭೂಮಿ ಮಾರ್ಗದಲಿ, ವೈರಾಗ್ಯಸಾಧನದಿ .... ೧೮
ಮಲೆನಾಡಿನೊಂದಿರುಳು ಮುಂಗಾರು ಮಳೆ ಹುಯ್ದು .... ೩೯
ಮಳೆ ಬಂದು ನಿಂತಿಹುದು ; ಮಿಂದಿಹುದು ಹಸುರೆಲ್ಲ ; .... ೧೧
ಮಿತ್ರರಿರ, ಮಾತಿಲ್ಲಿ ವ್ಯಲಿಗೆ ; ಸುಮ್ಮನಿರಿ : .... ೧೩
ಮೇಲೆ ಬಾನುಕ್ಕುನೀಲಿಯಲಿ ತೇಲುತಿದೆ ರವಿ ; .... ೪೫
ಯಂತ್ರದ ದಯೆಯು ಮೃಗದ ನಿಷ್ಕರುಣೆಗಿಂತಲೂ .... ೬೬
ರಾಮಾಯಣದ ಮಹಾರತ್ನವೇದಿಯ ಮೇಲೆ, .... ೫೦
ವ್ಯೋಮಗೋಪುರ ಶಿಖರದಿಂದಿಳಿದು ಬಾ, ಹೇ ಅಮೃತೆ, .... ೭೫
ಶಾಂತವಾಗಿದೆ ಸಂಧ್ಯೆ ; ಮೃದುಲ ಸಾಯಂ ಕಾಂತಿ .... ೨
ಶ್ರೀ ಕೃಷ್ಣನೆಂದನರ್ಜುನಗೆ “ ಹೇ ಪಾರ್ಥ, .... ೭೧
ಸರಸತಿಯ ಬೀಣೆಗೊದಗಿಸೆ ತಂತಿಯಂ, ಧನ್ಯೆ .... ೬೦
ಸಂಜೆಗಿರಿಯಲಿ ಸಂಜೆ : ಯಾವ ದೊರೆ ನನಗೆ ಸರಿ ? .... ೬
ಸಾಗುತಿದೆ ದೇವೇಂದ್ರನೈರಾವತಂ. ಬಳ್ಳು .... ೩೨
ಸುತ್ತಿದನು ಪೃಥ್ವಿಯಂ ಸಮರಶೇಷಂ, ತನ್ನ .... ೬೨
ಸೂರ್ಯನಂ ಸುತ್ತುತಿಹ ಪೃಥ್ವಿಯ ಮಹಾಛಾಯೆ .... ೫೬
ಸೋತೆನ್ ; ಎನ್ನಿಂದಾಗದಿನ್ ಮೇಲೆ; ಗುರುದೇವ, .... ೧೬
ಸ್ವಾರ್ಥತಾ ಸೂತ್ರಂಗಳಿಂ ನೆಯ್ಯುತಿದೆ ಸೃಷ್ಟಿ .... ೫೨
ಹರಿಯುತಿಹುದಿರುಳ್ನಿದ್ದೆ ತಿರೆಯ ಮನದಿಂ, ತೇಲಿ .... ೪೭
ಹಾಲು ಸಕ್ಕರೆ ಸೇರಿ ನೀವಾದಿರಾಚಾರ್ಯ .... ೫೪
ಹೋಮರ್, ನಿನ್ನ ಕಲೆ ಪಿರಿದಾದೊಡಂ ನಿನ್ನ .... ೫೧



# ಕನ್ನಡ ಕಾವ್ಯಮಾಲೆ

ಬೆಳೆಯುತ್ತಿರುವ ಕನ್ನಡ ಗ್ರಂಥಮಾಲೆ. ಕಥೆ, ಕವಿತೆ, ಮಹಾಕಾವ್ಯ, ಕಾದಂಬರಿ, ನಾಟಕ, ಚಿತ್ರ, ಪ್ರಬಂಧ, ವಿಮರ್ಶೆ, ಭಾಷಣ ಇತ್ಯಾದಿಯಾದ ಬಹುವಿಧದ ಕೃತಿಗಳನ್ನೊಳಗೊಂಡ ಕಾವ್ಯಮಾಲೆ. ಪ್ರಕಟನೆಗಳು ಸಾಮಾನ್ಯವಾಗಿ ಕ್ರೌನ್ ಅಷ್ಟಪತ್ರದ ಆಕಾರದಲ್ಲಿವೆ. ಇದುವರೆಗೆ ಪ್ರಕಟವಾಗಿರುವ ಗ್ರಂಥಗಳು—

**ಕುವೆಂಪು—**

೧. ಕಥನ ಕವನಗಳು ೧ ೮
೨. ಸಂನ್ಯಾಸಿ ಮತ್ತು ಇತರ ಕಥೆಗಳು ೧ ೪
೩. ಚಿತ್ರಾಂಗದಾ (ಮಹಾಕಾವ್ಯ) ೧ ೮
೪-೧೧. ಕಾನೂರು ಸುಬ್ಬಮ್ಮ ಹೆಗ್ಗಡಿತಿ ೮ ೮
೧೨. ನನ್ನದೇವರು, ಇತರ ಕಥೆಗಳು ೧ ೪

**ಪು. ತಿ. ನರಸಿಂಹಾಚಾರ್—**

೧೩. ಅಹಲ್ಯೆ (ಗೀತರೂಪಕ) ೧-೧೨

**ಕುವೆಂಪು—**

೧೪. ಮೂರು ನಾಟಕಗಳು ೧-೧೨

**ತೀ. ನಂ. ಶ್ರೀಕಂಠಯ್ಯ—**

೧೫. ರಾಕ್ಷಸನ ಮುದ್ರಿಕೆ (ನಾಟಕ) ೧ ೪

**ಗೊರೂರು ರಾಮಸ್ವಾಮಿ ಐಯಂಗಾರ್—**

೧೬. ಹಳ್ಳಿಯ ಬಾಳು (ಚಿತ್ರಗಳು) ೧ ೪

**ಪು. ತಿ. ನರಸಿಂಹಾಚಾರ್—**

೧೭. ದೋಣಿಯ ಬಿನದ ಮತ್ತು ಕವಿ ೧ ೦
೧೮. ರಾಮಾಚಾರಿಯ ನೆನಪು (ಚಿತ್ರ) ೧ ೪
೧೯. ಶಾರದಯಾಮಿನಿ (ಕವಿತಾಸಂಗ್ರಹ) ೧ ೦

**ಕುವೆಂಪು—**

೨೦. ಸಾಹಿತ್ಯಪ್ರಚಾರ, ಭಾಷಣಗಳು ೧ ೪
೨೧. ನಿರಂಕುಶಮತಿಗಳಾಗಿ ೦-೧೨
೨೨. ಕೊಳಲು (ಕವಿತಾ ಸಂಗ್ರಹ) ೧ ೮
೨೩. ಮಲೆನಾಡಿನ ಚಿತ್ರಗಳು ೧-೧೨
೨೪. ಪಾಂಚಜನ್ಯ (ರುದ್ರ ಕವನಗಳು) ೧ ೪
೨೫. ಕೋಗಿಲೆ ಮತ್ತು ಸೋವಿಯಟ್ ರಷ್ಯಾ (ಕವಿತೆಗಳು) ೧ ೦

**ಎಸ್. ವಿ. ರಂಗಣ್ಣ—**

೨೬. ಶೈಲಿ ೨ ೦

**ಆನಂದ—**

೨೭. ಸ್ವಪ್ನಜೀವಿ, ಇತರ ಕಥೆಗಳು ೧ ೦

**ಪು. ತಿ. ನರಸಿಂಹಾಚಾರ್—**

೨೮. ಗೋಕುಲ ನಿರ್ಗಮನ ೧ ೦

**ಕುವೆಂಪು—**

೨೯. ರಕ್ತಾಕ್ಷಿ (ನಾಟಕ) ೧-೧೨

**ಪು. ತಿ. ನರಸಿಂಹಾಚಾರ್—**

೩೦. ರಥಸಪ್ತಮಿ, ಇತರ ಚಿತ್ರಗಳು ೧ ೦

**ಎ. ಎನ್. ಮೂರ್ತಿರಾವ್—**

೩೧. ಆಷಾಢಭೂತಿ ೧ ೦
೩೨. ಹಗಲುಗನಸುಗಳು ೧ ೪

# ಪ್ರಕಟನೆಗಳು (ಮುಂದುವರಿದದ್ದು)

**ಆನಂದ—**

೩೩. ಮಾಟಗಾತಿ (ಸಣ್ಣ ಕಥೆಗಳು) ೧ ೪

**ಸಿ. ಕೃಷ್ಣ—**

೩೪. ಮುಗುದೆಯರ ಪತ್ರಗಳು ೧ ೮

**ಕುವೆಂಪು—**

೩೫. ಬಿರುಗಾಳಿ (ನಾಟಕ) ೧ ೪

**ತೀ. ನಂ. ಶ್ರೀಕಂಠಯ್ಯ—**

೩೬. ಹರಿಹರನ ನಂಬಿಯಣ್ಣನ ರಗಳೆ ೨ ೦

೩೭. ನಂಬಿಯಣ್ಣನರಗಳೆ ೨ನೆಯ ಭಾಗ

**ಪು. ತಿ. ನರಸಿಂಹಾಚಾರ್—**

೩೮. ಧ್ವಜರಕ್ಷಣೆ (ಕಥೆಗಳು) ೧ ೪

**ಕುವೆಂಪು—**

೩೯. ಅಗ್ನಿಹಂಸ (ಕವಿತೆಗಳು) ೧ ೮

೪೦. ಯಮನ ಸೋಲು, ಇತರ ನಾಟಕಗಳು ೧ ೨

೪೧. ಪ್ರೇಮಕಾಶ್ಮೀರ (ಕವನಗಳು) ೧ ೮

೪೨. ಕೃತ್ತಿಕೆ (ಸಾನೆಟ್ ಕವಿತೆಗಳು) ೧ ೪

**ಎಸ್. ಜಿ. ಶಾಸ್ತ್ರಿ—**

೪೩. ಇದ್ದರೂ ಇರಬಹುದು (ಕಥೆಗಳು)

## ಬರಲಿವೆ

**ಆನಂದ—**

ಪಕ್ಷಿಗಾನ

**ಗೊರೂರು ರಾಮಸ್ವಾಮಿ ಐಯ್ಯಂಗಾರ್—**

ಬೆಸ್ತರ ಕರಿಯ (ಚಿತ್ರಗಳು)
ಹತ್ತು ಕಥೆಗಳು
ಯುದ್ಧದ ಅನುಭವಗಳು (ಚಿತ್ರಗಳು)

**ಕುವೆಂಪು—**

ನವಿಲು (ಕವಿತೆಗಳು)
ಕಲಾಸುಂದರಿ (ನವಿಲು ೨ನೆಯ ಭಾಗ)
ಕಾವ್ಯವಿಹಾರ (ವಿಮರ್ಶೆಗಳು)
ಕಾವ್ಯದಲ್ಲಿ ತಪಸ್ಸು, ಭವ್ಯತೆ, ಪೂರ್ಣದೃಷ್ಟಿ (ವಿಮರ್ಶೆಗಳು)
ಮಲೆಗಳಲ್ಲಿ ಮದುಮಗಳು
ಶ್ರೀರಾಮಾಯಣ

**ತೀ. ನಂ. ಶ್ರೀಕಂಠಯ್ಯ—**

ಆಧುನಿಕ ಭಾವಗೀತೆಗಳು (ಸಂಕಲನ)

**ಇವೇ ಮೊದಲಾದವು**

ಲೈಬ್ರರಿ ಪ್ರತಿಗಳಿಗೆ ಬೆಲೆ ಸಾಮಾನ್ಯವಾಗಿ ೧ ರೂ. ಜಾಸ್ತಿಯಾಗುತ್ತದೆ

---

ಕಾವ್ಯಾಲಯ * ಪ್ರಕಾಶಕರು * ಮೈಸೂರು

# ಸಿ. ಕೃಷ್ಣ ಅವರ ಎರಡು ಕೃತಿರತ್ನಗಳು

## ನನ್ನ ಅಪ್ಸರೆ ಬೆ. ೬ ಆಣೆ.

ತನ್ನ ಕನಸಿನ ಅಪ್ಸರೆಯನ್ನು ಕಂಡು....ಅನಂತಭಾವದ ಕನಸುಗಳನ್ನು ಈ ಚಿಕ್ಕ ಪುಸ್ತಕದಲ್ಲಿ ಹಿಡಿದುಹಾಕಲು ಪ್ರಯತ್ನಿಸಿದ್ದಾರೆ. —ಕರ್ಮವೀರ

ಇದು ಹೊಸ ಬಗೆಯ ನಿರೂಪಣೆ....ಶೈಲಿ ಬಹು ಸುಂದರ; ಅತಿ ಬಂಧುರ.... ಈ ಪುಟ್ಟ ಪುಸ್ತಕವನ್ನು ಓದಿದರೆ ಸವಿಜೇನು ಮೆದ್ದಂತೆ! ಕೆನೆಹಾಲು ಕುಡಿದಂತೆ! ಮಲ್ಲಿಗೆಯ ಮೂಸಿದಂತೆ! ಮನಸ್ಸಿಗೆ ಆನಂದ. —ಕನ್ನಡನುಡಿ

ಹವಣರಿತ ಶೃಂಗಾರ ಝುರಿ ಇಲ್ಲಿ ಹರಿಯುತ್ತದೆ. ನಯವಾದ ಪ್ರಣಯಾಭಿ ರುಚಿ ಕಾಣಬರುತ್ತದೆ. ಒಲಿದ ಹೆಣ್ಣಿನ ಬಗೆಗೆ ಸರಸಿಯೂ ಪ್ರೇಮಪರನೂ ಆದ ಗಂಡಿನ ಹೃದಯ ತುಡಿಯುವ ಬಗೆಯನ್ನು ಇಲ್ಲಿ ಕಾಣಬಹುದು.

ಕೃತಿ ಚಿಕ್ಕದಾಗಿ ಓದುವುದಕ್ಕೆ ಹಿತವಾಗಿದೆ. ಚೆಲುವು ಒಲವುಗಳ ಆರಾಧನೆ ಇಲ್ಲಿ ನೂರು ರೂಪದಲ್ಲಿ ನಡೆದಿದೆ. —ದೇಶಬಂಧು

ಹಳದಿಯ ಬಣ್ಣದ ಹತ್ತೊಂಬತ್ತು ಗದ್ಯವಚನಗಳು....ಮೃದು ಮಧುರವಾದ ಭಾವತರಂಗಗಳು, ಸುಮಕೋಮಲವಾದ ಮನಸ್ಸು, ಮೃದಂಗ ಧ್ವನಿಯಂಥ ಮಾತಿನ ಮಾಲೆಗಳೂ....ಹಿತಮಿತ ಶಾಂತಮನೋಧರ್ಮ–ಇವು ಯಾರಿಗಾದರೂ ಸಂತೋಷವನ್ನು ಕೊಡುವಂಥವೇ....ಯೌವನದ ಮೊದಲ ಮೋಹನ ಚಿತ್ರಗಳಿವು.

ಮುದ್ರಣವೂ ಮುಖಚಿತ್ರವೂ ತುಂಬ ಸುಂದರವಾಗಿವೆ; ಶ್ರೀ ಕೃಷ್ಣರು ಮಿತ ವಾಗಿ ಭಾಷೆಯನ್ನು ಬಳಸುವ ಒಳ್ಳೆಯ ಶೈಲಿಯನ್ನು ಪಡೆದಿದ್ದಾರೆ.

—ಪುಸ್ತಕ ಪ್ರಪಂಚ

## ಮುಗುದೆಯರ ಪತ್ರಗಳು ರೂ. ೧ ...

ಶ್ರೀ ಕೆ. ಎಸ್. ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ' ಯ ನಂತರ ಮೈಸೂರು ಸಾಹಿತಿಗಳು ಕೊಟ್ಟ ಕಾಣಿಕೆಗಳಲ್ಲಿ ಇದೇ ಅತ್ಯಂತ ಜನಪ್ರಿಯ— . .

[ಒಳಗೆ ನೋಡಿ